# ಒಬ್ಬನೇ ಇಬ್ಬರು




**ರಚಿತ : ತ್ರಿಮತ ಏಕೈಕ ಗುರುವು**


ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**



www.thraithashakam.org





# ಒಬ್ಬನೇ ಇಬ್ಬರು


ಗ್ರಂಥಕರ್ತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**


---





ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಅಕ್ಟೋಬರ್–2016

ಪ್ರತಿಗಳು : 1000 **ಬೆಲೆ. 90/–**

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ- ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.
54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು-ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ x ವಿಗ್ರಹ – ದೈವ x ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಹಿಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)
85. ಮೂರು ದೈವ ಗ್ರಂಥಗಳು-ಮೂರು ಪ್ರಥಮ ವಾಕ್ಯಗಳು
86. ಹೇತುವಾದ ಪ್ರಶ್ನೆಗಳು-ಸತ್ಯವಾದ ಉತ್ತರಗಳು
87. ದೈವಗ್ರಂಥಗಳಲ್ಲಿ ಸತ್ಯಾಸತ್ಯ ವಿಚಕ್ಷಣೆ



04

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಟಿ–ಸೃಷ್ಟಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ - ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ- ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ-ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ - ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು- ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು- ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು-ಆನಂದಮು.
81. ದಶ-ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು- ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು-ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು- ಆರು-ತೊಮ್ಮಿದಿ
89. 6-3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ-ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು-ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ-ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು - ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು-ಅಂತಮು.
114. ಮಾಯ ಮರ್ಮಮು-ಆತ್ಮ ಧರ್ಮಮು
115. ಶ್ರೀಕೃಷ್ಣುಡು ಚನಿಪೋಯಾಡಾ? ಚಂಪಬಡ್ಡಾಡಾ?
116. ಅಂತಿಮ ದೈವಗ್ರಂಥಮುಲೋ ಪ್ರಥಮವಾಕ್ಯಮುಲು
117. ಅದುರು-ಬೆದುರು
118. ಆಧ್ಯಾತ್ಮಿಕ ಪ್ರಶ್ನಲು-ಜವಾಬುಲು.

**ಸೂಚನೆ :** ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಲಾಗದ ಪದಗಳು ಹಾಗೆಯೇ ಮುದ್ರಿಸಲಾಗಿದೆ.

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P
Cell : ಲಕ್ಷ್ಮಿನಾರಾಯಣಾಚಾರಿ–09440556968. ವೆಂಕಟೇಶ್–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಹೊಸಪೇಟೆ, ಬಳ್ಳಾರಿ (ಜಿಲ್ಲೆ). K. A
Cell : 9611133635,
9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್,
ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು, ಚಿಕ್ಕಸೂಗುರು (ತಾ),
ರಾಯಚೂರು (ಜಿ), Cell:98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ಬೆಂಗಳೂರು–560085
Cell : 9036982829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಯೋಗೇಶ್**
ವಡ್ಡೇಪಾಲ್ಯಂ (ಗ್ರಾ),
ಕುಂದುರ್ಪಿ (ಮಂ), ಅನಂತಪುರ (ಜಿಲ್ಲಾ)
ಸೆಲ್:9620193341, 9739226839

**ಬಸವರಾಜ ಅಂಗಡಿ**
(ಸಾ) ಪೋತ್ನಾಳ, (ತಾ) ಮಾನವಿ,
ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಮಾರುತಿ ಟೆನ್ಟ್ ರೋಡ್, ಚಾಮರಾಜ
ಮೊಹಲ್ಲ, ಮೈಸೂರ್–547097
Cell : 9986369118

**T.V. ರಮಣ**
ಕತ್ತರಗುಪ್ಪೆ, ಬೆಂಗಳೂರು–560068
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್
ಫೀಲ್ಡ್ ರೋಡ್, ಬೆಂಗಳೂರು–066
Cell : 9482516023

**ಯೋಗೇಶ್**
ಸೂಲನಾಯಕನಹಳ್ಳಿ (ಗ್ರಾಮ),
ತುಮಕೂರು (ಜಿಲ್ಲೆ).
ಸೆಲ್:8762523963,9740744424

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

# ಒಬ್ಬನೇ ಇಬ್ಬರು



ಪ್ರಪಂಚದಲ್ಲಿ ಅತಿ ದೊಡ್ಡ ಪ್ರಶ್ನೆ, ಉತ್ತರವಿಲ್ಲದ ಪ್ರಶ್ನೆ ಒಂದೇ ಒಂದು ಇದೆ. **ದೇವರು ಯಾರು**? ಎನ್ನುವುದೇ ದೊಡ್ಡ ಪ್ರಶ್ನೆ ಮತ್ತು ಪ್ರಪಂಚದಲ್ಲಿ ಉತ್ತರವಿಲ್ಲದ ಪ್ರಶ್ನೆ. ಪ್ರಪಂಚದಲ್ಲಿ ಯಾವ ಪ್ರಶ್ನೆಗಾದರೂ ಉತ್ತರ ಹೇಳಬಹುದು ಆದರೇ, ದೇವರು ಯಾರು? ಎಂಬ ಪ್ರಶ್ನೆಗೆ ಉತ್ತರ ಹೇಳುವುದಕ್ಕೆ ಸಾಧ್ಯವಿಲ್ಲ. ಏಕೆಂದರೇ! ದೇವರನ್ನು ತಿಳಿದಿರುವವರು ಭೂಮಿಮೇಲೆ ಯಾರೂ ಇಲ್ಲ. ಭೂಮಿಮೇಲೆ ಬದುಕಿರುವವನು, ಅಂದರೇ ಶರೀರದೊಂದಿಗೆ ಸಜೀವವಾಗಿ ಇರುವವನು ಯಾರಾದರೂ ದೇವರನ್ನು ನೋಡಿರುವುದಿಲ್ಲ, ಸಂಪೂರ್ಣವಾಗಿ ತಿಳಿದಿರುವುದಿಲ್ಲ.

**ಪ್ರಶ್ನೆ:– ಮಧ್ಯದಲ್ಲಿ ಪ್ರಶ್ನೆ ಕೇಳುತ್ತಿರುವುದಕ್ಕೆ ಕ್ಷಮಿಸಿ. ಈಗಿನ ಕಾಲದಲ್ಲಿ ಬಹಳಜನ ಕ್ರೈಸ್ತರ ಬೋಧಕರು "ನಾವು ದೇವರನ್ನು ನೋಡಿದ್ದೇವೆ, ದೇವರೊಂದಿಗೆ ಮಾತನಾಡಿದ್ದೇವೆ" ಎಂದು ಹೇಳುತ್ತಿದ್ದಾರೆ. ಕೆಲವರು ಹಿಂದೂಗಳಲ್ಲಿ ಕೂಡಾ ಹಾಗೆಯೇ ಹೇಳುತ್ತಿರುವವರು ಇದ್ದಾರೆ. ರಾಮಕೃಷ್ಣ ಪರಮಹಂಸ ಎನ್ನುವ ವಿವೇಕಾನಂದರವರ ಗುರುಗಳು "ನಾನು ದೇವರನ್ನು ನೋಡಿದ್ದೇನೆ, ನಿನಗು ಕೂಡಾ ತೋರಿಸುತ್ತೇನೆ" ಎಂದು ಸ್ವತಃವಾಗಿ ವಿವೇಕಾನಂದನೊಂದಿಗೆಯೇ ಹೇಳಿದಂತೆ ಇದೆ. ನೀವೇನೋ "ಭೂಮಿ ಮೇಲೆ ಬದುಕಿರುವವನು ಯಾರೂ ನೋಡಲಿಲ್ಲ" ಎಂದು ಹೇಳುತ್ತಿದ್ದಿರ. ನಾವು ಮಧ್ಯದಲ್ಲಿ ಯಾರ ಮಾತನ್ನು ಕೇಳಬೇಕು? ಯಾರ ಮಾತು ಸತ್ಯವೋ ನೀವೇ ಹೇಳಿರಿ.**

**ಉತ್ತರ:–** ಯಾರ ಇಷ್ಟಕ್ಕವರು ನಮ್ಮ ಮಾತು ಸತ್ಯವೆಂದು ಹೇಳುತ್ತಿರುತ್ತಾರೆ. ಆದರೇ ಕೇಳುವವರೇ ವಿವೇಕದಿಂದ ಆಲೋಚಿಸಿ, ಶಾಸ್ತ್ರದೊಂದಿಗೆ ಹೋಲಿಸಿಕೊಂಡು, ಹೇತುಬದ್ಧವಾಗಿ ಪ್ರತಿಮಾತಿಗೂ ಉತ್ತರ ದೊರೆತಾಗ ಅದನ್ನೇ ನಂಬಬೇಕಾಗಿರುತ್ತದೆ. ಅಷ್ಟೇ ಹೊರತು ಹೇಳುವವನು ದೊಡ್ಡವನೆಂದೋ, ಹೇಳುವವನು ಸತ್ಯವಂತನೆಂದೋ ನಂಬಿ ವಿಶ್ವಾಶಿಸಿದರೆ ಅದು ಮೂಢನಂಬಿಕೆ ಯಾಗುವುದು. ಅದು ವಿವೇಕವಿಲ್ಲದ ನಂಬಿಕೆಯಾಗುವುದು. ಆದ್ದರಿಂದ ಕೇಳುವವನು ಪ್ರತಿಯೊಂದನ್ನು ಹೇತುಬದ್ಧವಾಗಿ ಆಲೋಚಿಸ ಬೇಕಾಗಿರುತ್ತದೆ.

ದೇವರ ಧರ್ಮಗಳೆಂದು ಹೇಳಲ್ಪಡುವವುಗಳಲ್ಲಿ **"ದೇವರು ರೂಪ, ನಾಮ, ಕ್ರಿಯೆಗಳು ಇಲ್ಲದವನು"** ಎಂಬ ಮಾತು ಬಹಳ ಮುಖ್ಯವಾದುದು. ದೇವರಿಗೆ ರೂಪವಿಲ್ಲ ಹಾಗೆಯೇ ದೇವರು ಕಾಣಿಸುವವನು ಕೂಡಾ ಅಲ್ಲ. ಹಾಗಿರುವಾಗ ದೇವರನ್ನು ನಾನು ನೋಡಿದ್ದೇನೆ ಎಂದು ಯಾರಾದರೂ ಅಂದರೇ ಅದು ಶುದ್ಧಸುಳ್ಳು ಎಂದು ಹೇಳಬಹುದು. **'ದೇವರು'** ಎಂಬ ಪದದಲ್ಲಿಯೇ **'ದೇವಲ್ಪಡುವವನು (ಹುಡುಕಲ್ಪಡುವವನು)'** ಎಂಬ ಅರ್ಥವಿದೆ. ಈ ಮಾತಿನ ಪ್ರಕಾರ ದೇವರು ಮನುಷ್ಯನಿಂದ ಯಾವಾಗಲೂ ಹುಡುಕಲ್ಪಡುವ ವನೇ ಹೊರತು ತಿಳಿಯಲ್ಪಡುವವನಲ್ಲವೆಂದೂ, ದೊರೆಯುವವನಲ್ಲವೆಂದೂ ತಿಳಿಯುತ್ತದೆ. ಸ್ಥೂಲ ಶರೀರದೊಂದಿಗೆ ಇರುವವನು ಯಾರಾದರೂ ದೇವರನ್ನು ನೋಡಲಿಲ್ಲವೆಂದು ಹೇಳುತ್ತಿದ್ದೇವೆ.

ದೇವರು ಈ ಪ್ರಪಂಚವನ್ನು ಸೃಷ್ಟಿಸುವ ಮೊದಲು ದೇವರೆಂದು ಕೂಡಾ ಹೇಳಲ್ಪಡುತ್ತಿರಲಿಲ್ಲ. ದೇವರನ್ನು ದೇವರು ಎಂದು ಹೇಳುವುದಕ್ಕೆ ಮತ್ತೊಬ್ಬ ಮನುಷ್ಯನಂತೂ ಇಲ್ಲ. ದೇವರ ಸ್ಥಿತಿ ಏನೋ! ಹೇಗಿರುತ್ತಿದ್ದನೋ! ಪ್ರಪಂಚ ಹುಟ್ಟಿದ ನಂತರ ಕೂಡಾ ಯಾರಿಗೂ ತಿಳಿದಿಲ್ಲ. ದೇವರು ಸೃಷ್ಟಿಸಿರುವ ಸೃಷ್ಟಿಯಲ್ಲಿನ ಮನುಷ್ಯರಿಗೆ ದೇವರು ಯಾರೋ, ಆತನ ಶಕ್ತಿ ಏನೋ ತಿಳಿಯುವುದಕ್ಕೆ ದೇವರನ್ನು ಕುರಿತಾದ ಸಮಾಚಾರವು ಅವಶ್ಯ. ದೇವರನ್ನು ಕುರಿತಾದ ಸಮಾಚಾರವನ್ನೇ 'ದೇವರ ಜ್ಞಾನ' ಎಂದು ಅನ್ನುತ್ತಿದ್ದೇವೆ. ದೇವರ ಜ್ಞಾನ ಇದು ಎಂದು ತಿಳಿಯುವುದಕ್ಕೆ ದೇವರ ಸಮಾಚಾರ ಸ್ವಲ್ಪವಾದರೂ ತಿಳಿದಿರುವವನು ಯಾರೂ ಇಲ್ಲ. ಆದ್ದರಿಂದ ದೇವರ ಜ್ಞಾನವು ಏನೋ? ಭೂಮಿಮೇಲೆ ಹುಟ್ಟಿರುವ ಯಾವ ಮನುಷ್ಯನಿಗೂ ತಿಳಿದಿಲ್ಲ. ಹಾಗಿರುವಾಗ ದೇವರ ಜ್ಞಾನವನ್ನು ದೇವರೇ ಹೇಳಬೇಕೇ ಹೊರತು ಮತ್ತಿತರ ಮಾನವನು ಯಾರೂ ಹೇಳಲಾರನು. ಆದ್ದರಿಂದ ಅಂತಿಮ ದೈವಗ್ರಂಥದಲ್ಲಿ ಹೇಳಲ್ಪಟ್ಟಿರುವ ಒಂದು ವಾಕ್ಯವು ಹೀಗಿದೆ ನೋಡಿರಿ. ಸೂರಾ 3 ಆಯತ್ 7 ***(3–7)*** ***"ಆತನು(ಅಲ್ಲಾಹ್)ನೇ ನಿನ್ನ ಮೇಲೆ ಈ ಗ್ರಂಥವನ್ನು (ಖುರಾನ್‌ನನ್ನು)***

*ಅವತರಿಸುವಂತೆ ಮಾಡಿದ್ದಾನೆ. ಇದರಲ್ಲಿ ಕೆಲವು ಸ್ಪಷ್ಟವಾದ ಅರ್ಥಕೊಡುವ (ಮುಹ್ಕಮಾತ್) ಆಯತ್‌ಗಳು ಇವೆ. ಅವು ಈ ಗ್ರಂಥಕ್ಕೆ ಮೂಲಗಳು. ಇನ್ನು ಕೆಲವು ಅಸ್ಪಷ್ಟವಾದ (ಮುತಷಾಬಿಹತ್) ಆಯತ್‌ಗಳು ಇವೆ. ಆದರೇ ತಮ್ಮ ಹೃದಯಗಳಲ್ಲಿ ವಕ್ರತೆಯಿರುವವರು ಚಳವಳಿಯನ್ನು ಪ್ರೇರೇಪಿಸುವುದಕ್ಕೆ, ಗೂಢಾರ್ಥಗಳನ್ನು ಕಲ್ಪಿಸಿ ಯಾವಾಗಲೂ ಅಸ್ಪಷ್ಟವಾದವುಗಳ ಹಿಂದೆಬೀಳುತ್ತಾರೆ. ಅವುಗಳ ನಿಜ ಅರ್ಥವು ಅಲ್ಲಾಹ್‌ಗೆ ಹೊರತು (ದೇವರಿಗೆ ಹೊರತು) ಇತರರಿಗ್ಯಾರಿಗೂ ತಿಳಿದಿಲ್ಲ. ಆದರೇ ಪರಿಪಕ್ವ ಜ್ಞಾನ ಇರುವವರು "ನಾವು ಇದನ್ನು ವಿಶ್ವಾಶಿಸಿದ್ದೇವೆ ಪ್ರತಿಯೊಂದು ನಮ್ಮ ಪ್ರಭು ಬಳಿಯಿಂದ ಬಂದಿರುವುದೇ!" ಎಂದು ಹೇಳುತ್ತಾರೆ. ಶ್ರದ್ಧೆ, ಜ್ಞಾನ ಇರುವವರು ಹೊರತು ಇತರರು ಇವುಗಳನ್ನು ಗ್ರಹಿಸಲಾರರು.*

ಈ ವಾಕ್ಯವನ್ನು ಅನುಸರಿಸಿ ದೇವರ ಜ್ಞಾನವು ದೇವರಿಗೆ ಹೊರತು ಇತರರಿಗ್ಯಾರಿಗೂ ತಿಳಿಯದೆಂದು ಅರ್ಥವಾಗುತ್ತಿದೆ. ದೇವರ ಜ್ಞಾನ ತಿಳಿಯಬೇಕೆಂದರೇ ದೇವರು ಹೇಳಿರುವ ಗ್ರಂಥದಲ್ಲಿಯೇ ನೋಡಬೇಕಾಗಿರುತ್ತದೆ. 'ದೇವರು ಸ್ವತಃವಾಗಿ ಯಾವ ಕೆಲಸ ಮಾಡುವುದಿಲ್ಲ' ಎಂದು ಹೇಳಿದರೂ, ದೇವರು ಮಾಡದಂತೆ ತನ್ನ ಪ್ರಕೃತಿಯಿಂದ ಎಲ್ಲ ಕಾರ್ಯಗಳನ್ನು ಮಾಡಿ ಸುತ್ತಿದ್ದಾನೆ. ದೇವರು ತನ್ನ ಜ್ಞಾನವನ್ನು ಸೃಷ್ಠಿ ಆದಿಯಲ್ಲಿಯೇ ಪ್ರಕೃತಿಯಲ್ಲಿ ಒಂದು ಭಾಗವಾಗಿರುವ ಆಕಾಶದಿಂದ ಹೇಳಿಸಿದ್ದಾನೆ. ಪ್ರಕೃತಿಯಲ್ಲಿ ಆಕಾಶ ಭೂತವೆಂಬ ಒಂದು ಭಾಗದಿಂದ ದೇವರ ಜ್ಞಾನವು ಮೊಟ್ಟಮೊದಲು ಹೇಳಲ್ಪಟ್ಟಿದೆ. ಮೊದಲು ಹೇಳಿರುವುದು ಆಕಾಶವಾದರೂ, ಮೇಲ್ನೋಟಕ್ಕೆ ಎಲ್ಲರಿಗೂ ತಿಳಿದಿರುವುದು ಆಕಾಶ ಭೂತವಾದರೂ, ಆಕಾಶ ಭೂತದಲ್ಲಿ ಅಡಗಿ ಯಾರಿಗೂ ತಿಳಿಯದೇ ಇರುವ ಆತ್ಮವೇ ಜ್ಞಾನವನ್ನು ಹೇಳಿದೆಯೆಂದು ಹೇಳುತ್ತಿದ್ದೇವೆ. ಅಡಗಿರುವ ಆತ್ಮ ಹೇಳಿದೆಯೆಂದು ಯಾರಿಗೂ ತಿಳಿದಿಲ್ಲ. ಆದ್ದರಿಂದ ಮೊದಲು ಆಕಾಶವು ತನ್ನ ವಾಣಿಯಿಂದ (ಶಬ್ಧದಿಂದ) ದೇವರ ಜ್ಞಾನವನ್ನು ಹೇಳಿರುವುದೆಂದು ಅರ್ಥವಾಗಿದೆ.

**ಪ್ರಶ್ನೆ:- ದೇವರು ರೂಪ, ನಾಮ, ಕ್ರಿಯೆಗಳು ಇಲ್ಲದವನಾದ್ದರಿಂದ ಇತರರಿಗೆ ಕಾಣಿಸುವುದಿಲ್ಲ, ಇಂಥವನೆಂಬ ಹೆಸರು ಇಲ್ಲದೆ ಇರಬಹುದು. ಆದರೇ ಕ್ರಿಯೆ ಆದ ಕಾರ್ಯಗಳನ್ನು ಮಾಡದೆ ಹೋದರೂ ಪರವಾಗಿಲ್ಲ ತನ್ನ ಜ್ಞಾನವನ್ನು ತಾನೇ ಸ್ವತಃವಾಗಿ ಹೇಳಬಹುದು ಅಲ್ಲವೇ! ಆಕಾಶದ ಮೂಲಕ ಹೇಳಿಸಿದರೂ, ಇತರರಿಗೆ ತಿಳಿಯದೆಂಬ ತನ್ನ ಮಾತು ವ್ಯರ್ಥವಾಗಿ ಹೋಗುವುದು. ಆಕಾಶಕ್ಕೆ ದೇವರ ಜ್ಞಾನವು ತಿಳಿದಿರುವಹಾಗೆ ಇತರರಿಗೆ ಅರ್ಥವಾಗುವುದು ಅಲ್ಲವೇ! ಅದರಿಂದ ದೇವರ ಜ್ಞಾನವು ದೇವರಿಗೆ ಹೊರತು ಇತರರಿಗೆ ತಿಳಿಯದೆಂಬ ಮಾತು ಅಸತ್ಯವಾಗಿ ಕಾಣಿಸುತ್ತದೆ ಅಲ್ಲವೇ! ಇದಕ್ಕೆ ನೀವೇನು ಹೇಳುವಿರಿ?**

**ಉತ್ತರ:-** ದೇವರ ಮಾತು ಎಂದಿಗೂ ಅಸತ್ಯವಲ್ಲ ಆದರೇ, ನಾವು ದೇವರ ಮಾತನ್ನು ಅರ್ಥ ಮಾಡಿಕೊಳ್ಳುವುದರಲ್ಲಿ ತಪ್ಪಾಗಿ ಅರ್ಥೈಸಿಕೊಂಡಿರಬಹುದು. ಇಂತಹ ಪ್ರಶ್ನೆಗಳು ಮುಂದೆಬರುತ್ತವೆಂದು ದೇವರು ಮೊದಲೇ ಅಂತ್ಯದಲ್ಲಿ ಹೇಳಿರುವ ಬೋಧನೆಯಲ್ಲಿ ಹೀಗೆ ಹೇಳಿದ್ದಾನೆ. ಸೂರಾ 42 ಆಯತ್ 51 (42-51) **"ದೇವರು ಯಾವ ಮಾನವನೊಂದಿಗೂ ಪ್ರತ್ಯಕ್ಷವಾಗಿ ಮಾತನಾಡುವನಲ್ಲ. ದೇವರೊಂದಿಗೆ ಮಾತನಾಡುವುದು ಮನುಷ್ಯನಿಗೆ ಸಾಧ್ಯವಾಗುವ ಕೆಲಸವಲ್ಲ. ದೇವರು ತನ್ನ ಜ್ಞಾನವನ್ನು ವಾಣಿ ಮೂಲಕ ಅಥವಾ ತೆರೆಹಿಂಬದಿಯಿಂದ ಮನುಷ್ಯನಿಗೆ ಸೇರಿಸುತ್ತಾನೆ ಅಥವಾ ತಾನು ಕೋರಿರುವುದನ್ನು ತನ್ನ ಆಜ್ಞೆಯಿಂದ ಸೂಚಿಸುವುದಕ್ಕೆ ತನ್ನ ಪ್ರತಿನಿಧಿಯನ್ನು ಕಳುಹಿಸುತ್ತಾನೆ. ಆತನು ಮಹೋನ್ನತನು, ಎಷ್ಟೋ ವಿವೇಕವಂತನು"**. ಈ ಮಾತುಗಳನ್ನು ಗ್ರಹಿಸಿದರೇ ದೇವರು ತನ್ನ ಜ್ಞಾನವನ್ನು ಮೂರು ವಿಧಗಳಾಗಿ ಭೂಮಿ ಮೇಲಿರುವ ಮನುಷ್ಯರಿಗೆ ತಿಳಿಸುತ್ತಾನೆಂದು ತಿಳಿಯುತ್ತದೆ. ದೇವರು ಹೇಳಿರುವ ಮೂರು ವಿಧಾನಗಳು ದೇವರು ನಿರ್ಣಯಿಸಿರುವವೇ ಆಗಿರುವುದರಿಂದ, ದೇವರು ಯಾವ ವಿಧಾನದಲ್ಲಿ ಜ್ಞಾನವನ್ನು ಹೇಳಿದರೂ ಅದು ದೇವರು ಹೇಳಿದಂತೆಯೇ ಆಗುವುದು. ಒಂದು ವಿಧವಾಗಿ ದೇವರು ತಾನು ಸ್ವತಃವಾಗಿ ಕೆಲಸ ಮಾಡದಿದ್ದರೂ, ತನ್ನ ಸಂಕಲ್ಪದಿಂದ ಇತರರ ಮೂಲಕ ಕೆಲಸ ಮಾಡಿಸಿ ಪ್ರಜೆಗಳಿಗೆ ತನ್ನ ಜ್ಞಾನವನ್ನು ತಿಳಿಸುತ್ತಿದ್ದಾನೆ. ದೇವರ ಜ್ಞಾನವು ದೇವರಿಗೆ ಹೊರತು ಇತರ ಮನುಷ್ಯರಿಗೆ ಯಾರಿಗೂ

ತಿಳಿಯದೆಂದು ಹೇಳಿದ್ದಾನೆ. ಅಷ್ಟೇ ಹೊರತು ತನ್ನಲ್ಲಿ ಭಾಗವಾಗಿರುವ ಆತ್ಮಕ್ಕೆ ಅಥವಾ ತನ್ನ ಪ್ರತಿನಿಧಿಯಾಗಿರುವ ಭಗವಂತನಿಗೆ ತಿಳಿಯದೆಂದು ಹೇಳಲಿಲ್ಲ ಅಲ್ಲವೇ!

ಆಕಾಶ ಶಬ್ಧದ ಮೂಲಕ ಹೇಳಿದಾಗಾಗಲೀ, ತೆರೆ ಹಿಂಬದಿಯಿಂದ ಹೇಳಿದಾಗಾಗಲೀ ತನ್ನ ಪ್ರತಿನಿಧಿ ಹೇಳಿದಾಗಾಗಲೀ ತಿಳಿಸಿರುವ ಜ್ಞಾನವು ದೇವರ ಆತ್ಮ ತಿಳಿಸಿರುವುದೇ ಆಗಿರುವುದರಿಂದ ಸ್ವತಃವಾಗಿ ತಾನೇ (ದೇವರೇ) ಜ್ಞಾನವನ್ನು ತಿಳಿಸಿದಂತೆ ಆಗುತ್ತಿದೆ. ದೇವರು ತನ್ನಿಂದ ಎರಡು ಆತ್ಮಗಳನ್ನು ಹೊರಗೆ ತೆಗೆದಿದ್ದಾನೆ. ಅದರಲ್ಲಿ ಒಂದು ಜೀವಾತ್ಮವಾದರೇ ಎರಡನೆಯದು ಆತ್ಮವಾಗಿ ಇದೆ. ಈ ಎರಡು ಆತ್ಮಗಳನ್ನೇ ಭಗವದ್ಗೀತೆಯಲ್ಲಿ ಒಬ್ಬನು ನಾಶವಾಗುವವನು, ಮತ್ತೊಬ್ಬನು ನಾಶವಾಗದವನು ಎಂದು ಹೇಳಿದ್ದಾನೆ. ಅವರನ್ನೇ ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿಯೋಗವೆಂಬ ಅಧ್ಯಾಯದಲ್ಲಿ ಕ್ಷರನು, ಅಕ್ಷರನೆಂದು ಹೇಳಿದ್ದಾರೆ. ಜೀವಿಯನ್ನು ನಾಶವಾಗುವವನೆಂದು **'ಕ್ಷರನು'** ಎಂದು ಹೇಳಿದ್ದಾರೆ. ದೇವರ ಜ್ಞಾನ ಹೇಳುವುದಕ್ಕೆ ದೇವರ ಪ್ರತಿನಿಧಿಯಾಗಿ **ಅಕ್ಷರನಾದ** ಆತ್ಮವೇ ಕೆಲಸ ಮಾಡುತ್ತಿದೆ. ಅಕ್ಷರನಾದ ಆತ್ಮ ಇತ್ತ ಜೀವಾತ್ಮ ಕೆಲಸವನ್ನು, ಅತ್ತ ದೇವರ ಕೆಲಸವನ್ನು ಎರಡನ್ನೂ ಮಾಡುತ್ತಿದೆ. ಆದ್ದರಿಂದ ದೇವರು, ಜೀವಿಯು ಕೆಲಸ ಮಾಡದಿದ್ದರೂ ಕೆಲಸ ಮಾಡಿದವರಾಗಿಯೇ ಲೆಕ್ಕಿಸಲ್ಪಡುತ್ತಿದ್ದಾರೆ. ಮುಖ್ಯವಾಗಿ ಆತ್ಮ ದೇವರ ಕೆಲಸವನ್ನು ಮಾಡಿ ದೇವರ ಜ್ಞಾನವನ್ನು ಮೂರು ವಿಧಗಳಲ್ಲಿ ಪ್ರಪಂಚದಲ್ಲಿ ತಿಳಿಸುತ್ತಿದ್ದರೂ, ಆತ್ಮ ಅಡಗಿರುವುದರಿಂದ ಆತ್ಮವನ್ನು ಯಾರೂ ಗುರುತಿಸಲಾಗದೆ ಹೋಗುತ್ತಿದ್ದಾರೆ. ಮೊದಲು ಆಕಾಶದಲ್ಲಿ ಅಡಗಿರುವ ಆತ್ಮವೇ ಪರಮಾತ್ಮಯೊಂದರ ಜ್ಞಾನವನ್ನು ಹೇಳಿದರೂ ಕೊನೆಗೆ ಆಕಾಶವು ಹೇಳಿದಂತೆಯೇ ಎಲ್ಲರೂ ಗ್ರಹಿಸಿದ್ದಾರೆ. ಯಾರಿಗೂ ತಿಳಿಯದ ಆತ್ಮವನ್ನು ತಿಳಿಯದಂತೆ ಇರಿಸುವುದಕ್ಕೆ ದೇವರು ಕೂಡಾ ಆಕಾಶವಾಣಿ ಮೂಲಕ ಜ್ಞಾನವನ್ನು ತಿಳಿಸಿದ್ದೇನೆಂದು ಹೇಳಿದ್ದಾನೆ ಹೊರತು ತನ್ನ ಆತ್ಮ ಹೇಳಿದೆಯೆಂದು ಹೇಳಲಿಲ್ಲ.

**ಪ್ರಶ್ನೆ:- ಆತ್ಮ ದೇವರ ಪ್ರತಿನಿಧಿಯೆಂದು ಹೇಳಿದ್ದೀರಲ್ಲವೇ! ದೇವರಿಗು, ಆತ್ಮಕ್ಕು ಏನು ವ್ಯತ್ಯಾಸ ಇದೆ?**

**ಉತ್ತರ:–** ಪರಮಾತ್ಮ ಖಾಲಿ ಬೋರ್ಡುನಂಥದ್ದು. ಆತ್ಮ ಖಾಲಿ ಬೋರ್ಡಿನಲ್ಲಿ ಗೀಚಲ್ಪಟ್ಟ ಗೋಳದ ಬೊಂಬೆಯಂಥದ್ದು. ಖಾಲೀ ಬೋರ್ಡನ್ನು ಶೂನ್ಯಕ್ಕೆ ಹೋಲಿಸಬಹುದು. ಅದರಲ್ಲಿನ (ಬೋರ್ಡಿನಲ್ಲಿನ) ಗೋಳದ ಬೊಂಬೆಯನ್ನು ಆತ್ಮವಾಗಿ ಹೋಲಿಸಬಹುದು. ಖಾಲಿಬೋರ್ಡಿಗೆ ಆಕಾರವಿಲ್ಲ. ಖಾಲಿ ಬೋರ್ಡಿನಲ್ಲಿರುವ ಗೋಳದ ಬೊಂಬೆಗೆ ಆಕಾರವಿದೆ. ಆದ್ದರಿಂದ ಪರಮಾತ್ಮ ನಾದ ದೇವರಿಗೆ ಆಕಾರವಿಲ್ಲ, ಆತ್ಮಕ್ಕೆ ಆಕಾರವಿದೆಯೆಂದು ಹೇಳಬಹುದು. ಪರಮಾತ್ಮಗೆ ಆತ್ಮ ಪ್ರತಿನಿಧಿಯಾಗಿದ್ದು ದೇವರ ಕೆಲಸಗಳನ್ನು ಆತ್ಮವೇ ಮಾಡುತ್ತಿದೆ. ಪರಮಾತ್ಮನನ್ನು ಖಾಲಿ ಬೋರ್ಡಾಗಿ ಹೇಳಿದರೇ, ಆತ್ಮವನ್ನು ಬೋರ್ಡಿನಲ್ಲಿ ಗೋಳದಬೊಂಬೆಯಾಗಿ ಹೋಲಿಸಿ ಹೇಳಬಹುದು. ಪರಮಾತ್ಮ ಪ್ರಪಂಚವೆಲ್ಲಾ ಜೀವವಿರುವ, ಜೀವವಿಲ್ಲದವುಗಳಲ್ಲಿ ವ್ಯಾಪಿಸಿರುವಾಗ, ಆತ್ಮ ಜೀವವಿರುವ ಶರೀರಗಳಲ್ಲಿ ಜೀವಾತ್ಮಗೆ ಜೊತೆಯಾಗಿದೆ. ಜೀವವಿಲ್ಲದ ಪದಾರ್ಥಗಳಲ್ಲಿ ಆತ್ಮವಿಲ್ಲ. ಪರಮಾತ್ಮ ಜೀವವಿರುವ, ಜೀವವಿಲ್ಲದವುಗಳಲ್ಲಿ ಅಣುವಣುವೂ ವ್ಯಾಪಿಸಿ ಇರುವಾಗ, ಆತ್ಮ ಕೇವಲ ಜೀವವಿರುವವುಗಳಲ್ಲಿ ಮಾತ್ರವೇ ಇದೆ. ಆತ್ಮಗೆ ಆಕಾರವಿರುವಾಗ ಪರಮಾತ್ಮಗೆ ಆಕಾರವಿಲ್ಲ. ದೇವರಾದ ಪರಮಾತ್ಮ ಕೆಲಸ ಮಾಡುವುದಿಲ್ಲ. ಪರಮಾತ್ಮ ಕೆಲಸವನ್ನು ಮಾಡುವುದಕ್ಕೇ ಆತ್ಮ ಬದುಕಿರುವ ಶರೀರಗಳಲ್ಲಿ ಜೀವಿಯೊಂದಿಗೆ ಇರುತ್ತಿದೆ. ಶರೀರದಲ್ಲಿರುವ ಆತ್ಮ ಜೀವಿಯೊಂದಿಗೆ ಕರ್ಮವನ್ನು ಅನುಭವಮಾಡಿಸುತ್ತಾ ಅವಶ್ಯಬಂದಾಗ ದೈವಾಜ್ಞೆಯನ್ನು ನೆರವೇರಿಸುತ್ತಿದೆ.

ಸೃಷ್ಟಿ ಆದಿಯಲ್ಲಿ ಮೊಟ್ಟಮೊದಲು ಆಕಾಶವು ದೈವಜ್ಞಾನವನ್ನು ಹೇಳಿದಾಗ ಆಕಾಶವೆಂಬ ಭೂತ(ಜೀವಿ)ದಿಂದ ದೈವಜ್ಞಾನವನ್ನು ಆತ್ಮವೇ ಹೇಳಿದೆ. ಪರಮಾತ್ಮನಿಂದ ಬೇರ್ಪಟ್ಟು ಬಂದಿರುವುದು ಆತ್ಮವಾದಕಾರಣ ಪರಮಾತ್ಮ ಜ್ಞಾನವೆಲ್ಲವೂ ಆತ್ಮಗೆ ತಿಳಿಯುವುದು. ಸಮುದ್ರದಲ್ಲಿ ಇರುವುದೆಲ್ಲಾ ನೀರೇ ಆದರೂ ಸಮುದ್ರದಿಂದ ಎಗರಿಬಂದ ನೀರಿನ ಹನಿಯಲ್ಲಿಯೂಸಹ ನೀರೇ ಇದೆ. ನೀರಿನಲ್ಲಿರುವ ತೇವಾಂಶ ನೀರಿನ ಹನಿಯಲ್ಲಿಯೂ ಸಹ ಇರುವುದರಿಂದ

ಪರಮಾತ್ಮದಲ್ಲಿನ ಜ್ಞಾನವು ಆತ್ಮದಲ್ಲಿ ಸಹ ಇದೆ. ಆದ್ದರಿಂದ ದೇವರ ಜ್ಞಾನವು ದೇವರಿಗೇ ಅಲ್ಲದೇ ದೇವರ ಜ್ಞಾನವು ಆತ್ಮಗೆ ಕೂಡಾ ತಿಳಿಯುವುದು. ಆದ್ದರಿಂದ ದೇವರ ಜ್ಞಾನವನ್ನು ದೇವರು ಹೇಳದಿದ್ದರೂ ದೇವರ ಜ್ಞಾನವನ್ನು ಆತ್ಮವೇ ಹೇಳುತ್ತಿದೆ. ದೇವರು ಕೆಲಸಮಾಡಿ ತನ್ನ ಜ್ಞಾನವನ್ನು ಮನುಷ್ಯರಿಗೆ ಹೇಳದಿದ್ದರೂ ದೇವರ ಸ್ಥಾನದಲ್ಲಿ ಆತ್ಮ ಕೆಲಸ ಮಾಡಿ ದೇವರ ಜ್ಞಾನವನ್ನು ಮನುಷ್ಯರಿಗೆ ತಿಳಿಸುತ್ತಿದೆ. ಈ ವಿಧವಾಗಿ ಆತ್ಮ ದೇವರ ಕಾರ್ಯವನ್ನು ಮಾಡುತ್ತಿರುವುದರಿಂದ ದೇವರ ಕೆಲಸ ದೇವರು ಮಾಡದಿದ್ದರೂ ದೇವರು ಮಾಡಿದಂತೆಯೇ ನಡೆದುಹೋಗುತ್ತಿದೆ. ಆದ್ದರಿಂದ ದೇವರು ಅಂದುಕೊಂಡರೇ ಅಂದುಕೊಂಡಿರು ವುದು ಅಂದುಕೊಂಡಹಾಗೆಯೆ ನಡೆದುಹೋಗುತ್ತದೆ. ದೇವರು ಮೂರು ವಿಧಗಳಲ್ಲಿ ತನ್ನ ಜ್ಞಾನವನ್ನು ಮನುಷ್ಯರೊಂದಿಗೆ ತಾನು ಪ್ರತ್ಯಕ್ಷವಾಗಿ ಮಾತನಾಡದೆ ತಿಳಿಸುವೆನೆಂದು ಹೇಳಿರುವುದು ಈ ಪದ್ಧತಿ ಪ್ರಕಾರವೇ ಎಂದು ತಿಳಿಯಬೇಕು.

ದೇವರು ಮನುಷ್ಯರೊಂದಿಗೆ ಪ್ರತ್ಯಕ್ಷವಾಗಿ ಸಂಬಂಧ ಇಟ್ಟುಕೊಳ್ಳದೇ ಆತ್ಮ ಮೂಲಕ ಪರೋಕ್ಷ ಸಂಬಂಧವನ್ನು ಹೊಂದಿದ್ದಾನೆ. ಅದೇ ಪದ್ಧತಿಯಲ್ಲಿಯೇ ಮನುಷ್ಯರಿಗೆ ಮೂರು ವಿಧಗಳ ಜ್ಞಾನವನ್ನು ತಿಳಿಸಿದ್ದಾನೆ. ತೆರೆಯಮರೆಯಿಂದ ಜ್ಞಾನವನ್ನು ಹೇಳಿದಾಗಾಗಲೀ, ತನ್ನ ಪ್ರತಿನಿಧಿಯನ್ನು ಪ್ರತ್ಯಕ್ಷವಾಗಿ ಕಳುಹಿಸಿ ಜ್ಞಾನವನ್ನು ಹೇಳಿದಾಗಾಗಲೀ ಯಾರಿಗೂ ತಿಳಿಯದಂತೆ ಆತ್ಮವೇ ಮುಖ್ಯಪಾತ್ರ ಪೋಷಿಸಿ ಆ ಕಾರ್ಯಗಳನ್ನು ಮಾಡಿದೆ. ಈ ವಿಷಯವು ಈದಿನ ಎಲ್ಲರಿಗೂ ಹೊಸದಾಗಿ ಕಾಣಿಸಿದರೂ ಗತದಲ್ಲಿ ನಡೆದ ಸತ್ಯ ಅದೇ. ಈಗ ನಡೆಯುತ್ತಿರುವುದು ಸಹ ಅದೇ. ಆತ್ಮವಿಲ್ಲದೆ ಯಾವ ಶರೀರದಲ್ಲಿ ಕೂಡಾ ಏನೂ ನಡೆಯುವುದಿಲ್ಲ. ಪ್ರಥಮ ದೈವಗ್ರಂಥದಿಂದ ಕೊನೆಯದಾದ ಅಂತಿಮ ದೈವಗ್ರಂಥದ ವರೆಗು ಹೇಳಲ್ಪಟ್ಟಿರುವ ಜ್ಞಾನದಲ್ಲಿ ಈ ವಿಷಯವು ಸ್ಪಷ್ಟವಾಗಿ ತಿಳಿಯುತ್ತಿದೆ. ದೇವರಿಗೆ ತಿಳಿಯದಂತೆ ಯಾವುದೂ ನಡೆದಿಲ್ಲ. ಆದರೂ ದೇವರು ಏನೂ ಮಾಡಲಿಲ್ಲ.

**ಪ್ರಶ್ನೆ:– ನೀವು ಪ್ರಥಮ ದೈವಗ್ರಂಥ, ಮಧ್ಯಮ (ದ್ವಿತೀಯ) ದೈವಗ್ರಂಥ, ಅಂತಿಮ ದೈವಗ್ರಂಥವೆಂದು ಮೂರು ಹೆಸರುಗಳನ್ನು ಹೇಳುತ್ತಿದ್ದೀರ. ನೀವು ಹೊರತು**

**ಲೋಕದಲ್ಲಿ ಯಾರೂ ಇಲ್ಲಿಯವರೆಗು ಈ ಮೂರು ಹೆಸರುಗಳನ್ನು ಹೇಳಲಿಲ್ಲ. 'ಅಂತಿಮ ದೈವಗ್ರಂಥ ಖುರಾನ್' ಎಂದು ಬಹಳಜನ ಮುಸ್ಲಿಮ್ ಹಿರಿಯರು ಹೇಳುತ್ತಿದ್ದಾರೆ. ಅಷ್ಟೇಅಲ್ಲದೆ ಜಿಬ್ರಯೇಲ್ ಮುಹಮ್ಮದ್ ಪ್ರವಕ್ತರವರಿಗೆ ಖುರಾನ್ ಜ್ಞಾನವನ್ನು ಹೇಳಿದಾಗಲೇ ಖುರಾನ್‌ನನ್ನು ಅಂತಿಮ ದೈವಗ್ರಂಥವೆಂದು ಹೇಳುವುದು ನಡೆದಿದೆ. ಇದರ ಪ್ರಕಾರ ಖುರಾನ್ ಗ್ರಂಥವನ್ನು ಅಂತಿಮ ದೈವಗ್ರಂಥವೆಂದು ಹೇಳುವುದಕ್ಕೆ ಆಧಾರವಿದೆ. ಆದರೇ ನೀವು ಹೇಳುವಹಾಗೆ ಪ್ರಥಮ ದೈವಗ್ರಂಥ ಭಗವದ್ಗೀತೆಯೆಂದೂ, ದ್ವಿತೀಯ ದೈವಗ್ರಂಥ ಇಂಜೀಲು (ಬೈಬಲ್) ಎಂದು ಇಲ್ಲಿಯವರೆಗು ಯಾವ ಗ್ರಂಥದಲ್ಲೂ ಯಾರೂ ಹೇಳಲಿಲ್ಲ. ಯಾರೂ ಹೇಳದಿರುವುದನ್ನು ನೀವು ಹೇಳುವುದರಲ್ಲಿ ನಿಮ್ಮ ಉದ್ದೇಶವೇನು?**

**ಉತ್ತರ:-** ಯಾರೂ ಹೇಳದ ವಿಷಯವನ್ನೇ ನಾನು ಬೋಧನೆ ರೂಪದಲ್ಲಿ ಹೇಳುತ್ತಾ ಬಂದಿದ್ದೇನೆ. ಹಾಗೆಯೇ ಯಾರೂ ಬರೆಯದ ಜ್ಞಾನವನ್ನೇ ನಾನು ಗ್ರಂಥ ರೂಪದಲ್ಲಿ ಬರೆಯುತ್ತಾ ಬಂದಿದ್ದೇನೆ ಇಲ್ಲಿಯವರೆಗು 144 ಉಪನ್ಯಾಸಗಳನ್ನು ಹೇಳಿದ್ದೇನೆ, ಹಾಗೆಯೇ 75 ಗ್ರಂಥಗಳ ವರೆಗು ಬರೆದಿದ್ದೇನೆ. ಎಲ್ಲಾದರೂ ಇತರರು ಹೇಳಿರುವುದನ್ನು ನಾನು ಪ್ರವಚನೆಗಳಲ್ಲಿ ಹೇಳಿದ್ದೀನಾ? ಹಾಗೆಯೇ ಯಾವ ಗ್ರಂಥದಲ್ಲಾದರೂ ಇತರರು ಬರೆದಿರುವುದನ್ನು ಬರೆದಿದ್ದೀನಾ? ಇಲ್ಲಿಯವರೆಗೂ ತಿಳಿಯದ ವಿಷಯವನ್ನು ತಿಳಿಸುವುದೇ ನನ್ನ ಕೆಲಸವಾಗಿ ಇಟ್ಟುಕೊಂಡಿದ್ದೇನೆ. ಇಲ್ಲಿಯವರೆಗು ಯಾರಿಗೂ ತಿಳಿಯದ ವಿಷಯವನ್ನು ತಿಳಿಸುವುದೇ ನನ್ನ ಕರ್ತವ್ಯವಾದ್ದರಿಂದ ದೈವಗ್ರಂಥಗಳು ಎಷ್ಟು? ಅವು ಯಾವುವು? ಎಂಬ ವಿಷಯವನ್ನು ನಿಮಗೆ ತಿಳಿಸುವುದೇ ನನ್ನ ಉದ್ದೇಶವಾಗಿದೆ. ಆ ಪ್ರಯತ್ನದಲ್ಲಿಯೇ ಉಳಿದ ಎರಡು ದೈವಗ್ರಂಥಗಳನ್ನು ನಿಮಗೆ ತಿಳಿಸಿರುವುದಾಗಿದೆ. ಇಲ್ಲಿಯವರೆಗು ನಿಮಗೆ ತಿಳಿದಿರುವುದು ಅಂತಿಮ ದೈವಗ್ರಂಥ ಖುರಾನ್ ಎಂಬ ವಿಷಯವು ಒಂದು ಮಾತ್ರ. ಖುರಾನ್ ಅಂತಿಮ ದೈವಗ್ರಂಥ ಎಂಬ ಮಾತನ್ನು ನಾನು ಕೂಡಾ ಒಪ್ಪಿಕೊಳ್ಳುತ್ತಿದ್ದೇನೆ. ಆದರೇ ಖುರಾನ್‌ನನ್ನು ಅಂತಿಮ ದೈವಗ್ರಂಥವೆಂದು ಯಾವ ಲೆಕ್ಕ ಪ್ರಕಾರ ಅನ್ನುತ್ತಿದ್ದೀರೆಂದು ಪ್ರಶ್ನಿಸುತ್ತಿದ್ದೇನೆ.

ಎಲ್ಲರಬಳಿ ಅದಕ್ಕೆ ಇಲ್ಲಿಯವರೆಗು ಹೊಂದಾಣಿಕೆ ಇಲ್ಲದ ಸಮಾಧಾನ ಮಾತ್ರವೇ ಸಿಕ್ಕಿದೆ. ಶಾಸ್ತ್ರಬದ್ಧವಾದ, ಖಚಿತವಾದ, ಯಾರೂ ಖಂಡಿಸಲಾರದ ವಿಧವಾಗಿ ಉತ್ತರ ಸಿಗಲಿಲ್ಲ.

ಖುರಾನ್ ಗ್ರಂಥವನ್ನು ಅಂತಿಮ ದೈವಗ್ರಂಥವೆಂದು ಕುರುಡರಂತೆ ಒಪ್ಪಿಕೊಂಡರೇ ಅದರ ಹಿಂದೆ ಎಷ್ಟೋ ಪ್ರಶ್ನೆಗಳು ಬರಬಹುದು. ಆದ್ದರಿಂದ ಅದನ್ನು ಒಂದು ಲೆಕ್ಕದ ಪ್ರಕಾರ, ತಕ್ಕಂತಹ ವಿಧಾನದ ಪ್ರಕಾರ ಅಂತಿಮ ದೈವಗ್ರಂಥವೆಂದು ಹೇಳಲಾದಾಗ ಯಾರಿಗೂ ಅದನ್ನು ಕುರಿತು ಪ್ರಶ್ನೆ ಬರದೇಹೋಗುತ್ತದೆ. ಖುರಾನ್‌ನನ್ನು ಅಂತಿಮ ದೈವಗ್ರಂಥವೆಂದು ಮನುಷ್ಯರು ಹೆಸರಿಡಲಿಲ್ಲ. ದೇವರೇ ಆ ಹೆಸರನ್ನು ಇಡುವುದರಿಂದ ಅದು ವಾಸ್ತವವಾಗಿ ಅಂತಿಮ ದೈವಗ್ರಂಥವೆನ್ನುವುದಕ್ಕೆ ಯಾವ ಸಂಶಯವು ಇಲ್ಲ. ಅಂತಿಮ ದೈವಗ್ರಂಥವೆಂದು ಹೇಳಿದರೂ ಕೆಲವರು ಅವರಲ್ಲಿರುವ ಅನುಮಾನವು ಕೆಲವು ಪ್ರಶ್ನೆಗಳನ್ನು ಕೇಳುತ್ತಿರುತ್ತಾರೆ. ಆ ಪ್ರಶ್ನೆಗಳು ಹೀಗಿವೆ. **1) ಖುರಾನ್ ಅಂತಿಮ ದೈವಗ್ರಂಥವಾದರೇ ಅದಕ್ಕಿಂತ ಮೊದಲು ಎಷ್ಟು ಗ್ರಂಥಗಳಿವೆ? 2) ಕೊನೆಯ ದೈವಗ್ರಂಥವೆಂದರೇ ದೈವಗ್ರಂಥಗಳಲ್ಲಿ ಕಡಿಮೆ ಜ್ಞಾನವಿದೆಯೆಂದು ಅಂದುಕೊಳ್ಳಬಹುದಾ? 3) ದೈವಗ್ರಂಥಗಳು ಎಷ್ಟಿದ್ದರೂ ಅವುಗಳೆಲ್ಲದಕ್ಕಿಂತಲೂ ಕೊನೆಯದಾದ್ದರಿಂದ ಕೊನೆಯದಕ್ಕಿಂತಲೂ ಮೊದಲಿರುವವೇ ವರಸೆ ಕ್ರಮದಲ್ಲಿ ದೊಡ್ಡವೆಂದು ಅರ್ಥ ಅಲ್ಲವೇ!** ಎಂದು ಇಲ್ಲದಸಲ್ಲದ ಪ್ರಶ್ನೆಗಳನ್ನು ಕೇಳಬಹುದು. ಆದರೇ ಅಂತಿಮ ದೈವಗ್ರಂಥವೆಂದು ದೇವರೇ ಹೇಳಿರುವುದರಿಂದ ಅದಕ್ಕೆ ಒಂದು ನಿಯಮದ ಪ್ರಕಾರ ಉತ್ತರವನ್ನು ಹೇಳಬಹುದು. ಅಂತಿಮ ದೈವ ಗ್ರಂಥಕ್ಕಿಂತಲೂ ಮೊದಲು ಎಷ್ಟು ಗ್ರಂಥಗಳು ಇವೆ? ಒಟ್ಟು ದೈವಗ್ರಂಥಗಳು ಎಷ್ಟು? ಕೊನೆಯ ದೈವಗ್ರಂಥದಲ್ಲಿನ ಜ್ಞಾನವೊಂದರ ಸ್ಥಾನ ಎಷ್ಟು? ಎಂಬ ಪ್ರಶ್ನೆಗಳೆಲ್ಲವುಗಳಿಗೂ ಖುರಾನ್ ಗ್ರಂಥದಲ್ಲಿನ 42ನೇ ಸೂರಾ, 51ನೇ ಆಯತ್‌ನಲ್ಲಿ ಸಂಪೂರ್ಣವಾದ ಉತ್ತರವಿದೆ.

42ನೇ ಸೂರಾ, 51ನೇ ಆಯತ್‌ನಲ್ಲಿ ದೇವರು ತನ್ನ ಜ್ಞಾನವನ್ನು ಮೂರು ವಿಧಗಳಲ್ಲಿ ಭೂಮಿಮೇಲೆ ಮನುಷ್ಯರಿಗೆ ತಿಳಿಸುವೆನೆಂದು ಹೇಳಿರುವುದರಿಂದ ದೈವಗ್ರಂಥಗಳು ಮೂರೇ ಎಂದು ಹೇಳಬಹುದು. ಒಂದೊಂದು ವಿಧಾನದ ಪ್ರಕಾರ ಹೇಳಿರುವ ಜ್ಞಾನವು ಒಂದೊಂದು ಗ್ರಂಥವಾಗಿ ಬದಲಾಗಿಹೋಗಿರುವುದರಿಂದ ಪ್ರಪಂಚದಲ್ಲಿ ಮೂರೇ ದೈವಗ್ರಂಥಗಳು ಇವೆಯೆಂದು ಘಂಟಾಪಥವಾಗಿ ಹೇಳಬಹುದು. ಹೇಳಿರುವವನು ಒಬ್ಬನೇ, ಹೇಳಲ್ಪಟ್ಟಿರುವ ಜ್ಞಾನವು ಒಂದೇ ಆಗಿರುವುದರಿಂದ ಮೂರು ದೈವಗ್ರಂಥಗಳಲ್ಲಿನ ಜ್ಞಾನವು ಒಬ್ಬ ದೇವರನ್ನು ಕುರಿತು ಹೇಳಿರುವುದೇ ಆಗಿರುವುದರಿಂದ ಮೂರು ದೈವಗ್ರಂಥಗಳಲ್ಲಿ ಒಂದೇ ದೇವರ ಜ್ಞಾನವು ಹೆಚ್ಚುಕಡಿಮೆ ಎನ್ನದೇ ಒಂದೇ ಸ್ಥಾನದಲ್ಲಿ ಇದೆಯೆಂದು ಹೇಳಬಹುದು. ಭೂಮಿಮೇಲೆ ಹೇಳಲ್ಪಟ್ಟಿರುವ ವರಸೆ ಕ್ರಮದಲ್ಲಿ ಮುಂದೆ ಹಿಂದೆ ಇರುವುದರಿಂದ ಪ್ರಥಮ ದೈವಗ್ರಂಥವೆಂದೂ, ಮಧ್ಯಮ ಅಥವಾ ದ್ವಿತೀಯ ದೈವಗ್ರಂಥವೆಂದೂ, ಅಂತಿಮ ಅಥವಾ ತೃತೀಯ ದೈವಗ್ರಂಥವೆಂದೂ ಹೇಳಬಹುದು. ದೇವರು ತನ್ನ ಜ್ಞಾನವನ್ನು ತಿಳಿಸಿರುವ ಮೂರು ವಿಧಾನಗಳ ಪ್ರಕಾರ ಮೂರು ದೈವಗ್ರಂಥಗಳಾಗಿ ಹೇಳುತ್ತಿದ್ದೇವೆ.

ದೇವರು ಆಕಾಶವಾಣಿ ಮೂಲಕ, ತೆರೆಹಿಂಬದಿಯಿಂದ, ತನ್ನ ಪ್ರತಿನಿಧಿಯ ಮೂಲಕ ಮೂರು ವಿಧಗಳ ಜ್ಞಾನವನ್ನು ತಿಳಿಸಿದರೂ ನಮಗೆ ತಿಳಿದು ಆಕಾಶವಾಣಿ ಮೂಲಕ ಒಂದುಬಾರಿ ತಿಳಿಸಿದಹಾಗೆ ಹೇಳಬಲ್ಲೆವು. ಹಾಗೆಯೇ ತೆರೆ ಹಿಂಬದಿಯಿಂದ ಎರಡು ಸಲ ತಿಳಿಸಿದಂತೆ ಹೇಳಬಲ್ಲೆವು. ಇನ್ನೂ ಮೂರನೆಯ ವಿಧಾನದ ಪ್ರಕಾರ ತನ್ನ ಪ್ರತಿನಿಧಿಯನ್ನು ಕಳುಹಿಸಿ ಎರಡುಬಾರಿ ಜ್ಞಾನವನ್ನು ಹೇಳಿಸಿದ್ದಾನೆ. ಇವೆಲ್ಲವನ್ನೂ ಗಮನಿಸಿದರೇ ಆಕಾಶದ ಮೂಲಕ ಒಂದು, ತೆರೆಮರೆಯಿಂದ ಎರಡು, ಪ್ರತಿನಿಧಿಯ ಮೂಲಕ ಎರಡುಬಾರಿ ಒಟ್ಟು ಐದುಬಾರಿ ಹೇಳಿರುವುದಾಗಿದೆ. ಆದರೂ ಮೂರು ದೈವಗ್ರಂಥಗಳೇ ತಯಾರಾಗಿವೆ. ಹೇಳಲ್ಪಟ್ಟಿರುವ ವಿಧಾನವನ್ನು ಅನುಸರಿಸಿ, ಬರೆಯಲ್ಪಟ್ಟ ಕ್ರಮವನ್ನು ಅನುಸರಿಸಿ ದೈವಗ್ರಂಥಗಳು ಮೂರೇ ಎಂದು, ಅದಕ್ಕುಮೀರಿ ದೈವಗ್ರಂಥಗಳು

ತಯಾರಾಗುವುದಕ್ಕೆ ಸಾಧ್ಯವಿಲ್ಲವೆಂದು ಹೇಳಬಹುದು. **ಕೊನೆಯಲ್ಲಿ ಬರೆಯಲ್ಪಟ್ಟ ಗ್ರಂಥವಾಗಿರುವುದರಿಂದ ಖುರಾನ್‌ನನ್ನು ಅಂತಿಮ ದೈವಗ್ರಂಥವೆಂಬ ಹೆಸರು ಎಂದಿಗೂ ಚಿರಸ್ಥಾಯಿಯಾಗಿ ಇರುತ್ತದೆ. ಹಾಗೆಯೇ ಮೊದಲು ಬರೆಯಲ್ಪಟ್ಟ ಗ್ರಂಥವಾದ್ದರಿಂದ ಭಗವದ್ಗೀತೆ ಎಂದಿಗೂ ಪ್ರಥಮ ದೈವಗ್ರಂಥವಾಗಿಯೇ ಇರುತ್ತದೆ. ಹಾಗೆಯೇ ಬೈಬಲ್ ದ್ವಿತೀಯ ದೈವಗ್ರಂಥವಾಗಿಯೇ ಇರುತ್ತದೆ.** ಪ್ರಪಂಚದಲ್ಲಿ ಯಾವುದು ಬದಲಾದರೂ ದೈವಗ್ರಂಥಗಳ ವರಸೆ ಕ್ರಮ ಮಾತ್ರ ಬದಲಾಗುವುದಿಲ್ಲ. **ಪ್ರಥಮ, ಮಧ್ಯಮ, ಅಂತಿಮ** ಎನ್ನುವವು ವರಸೆ ಕ್ರಮವೇ ಹೊರತು ಜ್ಞಾನಸ್ಥಾನವನ್ನು ಅನುಸರಿಸಿ ಇಟ್ಟಿರುವ ಹೆಸರುಗಳಲ್ಲ.

ದೇವರು ನಿರ್ಣಯಿಸಿರುವ ಮೂರು ವಿಧಾನಗಳ ಪ್ರಕಾರ ಎಷ್ಟುಬಾರಿ ಹೇಳಿದರೂ ಒಂದೇ ದೇವರ ಜ್ಞಾನವನ್ನೇ ಹೇಳುತ್ತಿರುವುದರಿಂದ, ಪ್ರಪಂಚದಲ್ಲಿ ಬೇರೆ ದೇವರು ಮತ್ತೊಬ್ಬರು ಇಲ್ಲದಿರುವುದರಿಂದ, ಪ್ರಪಂಚಕ್ಕೆಲ್ಲಾ ಸೃಷ್ಠಿಕರ್ತ ಒಬ್ಬರೇ ಆಗಿರುವುದರಿಂದ, ಮೂರು ಗ್ರಂಥಗಳಲ್ಲಿರುವುದು ಒಂದೇ ದೇವರ ಜ್ಞಾನವೆಂದು ನೇರವಾಗಿ ಹೇಳಬಹುದು. ಮೊದಲು ಸೃಷ್ಠಿ ಆದಿಯಲ್ಲಿಯೇ ಆಕಾಶದ ಮೂಲಕ ದೇವರ ಜ್ಞಾನವು ಹೇಳಲ್ಪಟ್ಟಿದೆ. ದೇವರು ಹೇಳಿರುವ ಮೂರು ವಿಧಾನಗಳಲ್ಲಿ ಮೊದಲನೆಯದು ಆಕಾಶ ಶಬ್ಧದ ಮೂಲಕ ಹೇಳಲ್ಪಟ್ಟಿದೆ. ನಂತರ ತೆರೆಮರೆಯಿಂದ ಹೇಳಲ್ಪಟ್ಟಿದೆ. ಆ ನಂತರ ದೈವಪ್ರತಿನಿಧಿಯ ಮೂಲಕ ಹೇಳಲ್ಪಟ್ಟಿದೆ. ಇಲ್ಲಿ ಹೇಳಲ್ಪಟ್ಟಿರುವ ವಿಧಾನಗಳೇ ಮುಖ್ಯವಾಗಲೀ, ಯಾರು ಎಷ್ಟುಬಾರಿ ಹೇಳಿದ್ದಾರೆನ್ನುವುದು ಮುಖ್ಯವಲ್ಲ. ಹಾಗೆಯೇ ಗ್ರಂಥಗಳು ತಯಾರಿಯಾದ ವರಸೆಕ್ರಮವೇ ಮುಖ್ಯವಾಗಲೀ, ಹೇಳಿರುವ ವಿಧಾನವೊಂದರ ವರಸೆ ಮುಖ್ಯವಲ್ಲ.

ಆಕಾಶವು ಮೊದಲು ಜ್ಞಾನವನ್ನು ಹೇಳಿದರೂ ನಂತರ ಎಷ್ಟೋಬಾರಿ ಆಕಾಶವು ತನ್ನ ಶಬ್ಧದ ಮೂಲಕ ಜ್ಞಾನವನ್ನು ಹೇಳುವುದಾಗಿದೆ. ಹಾಗೆಯೇ ತೆರೆಮರೆಯಿಂದ ಕಾಣಿಸದೆ ಜ್ಞಾನವನ್ನು ಹೇಳಿರುವುದು ನಮಗೆ ತಿಳಿದು ಎರಡು ಬಾರಿಯೇ ಆದರೂ ಎಷ್ಟೋಬಾರಿ ಆ ಕೆಲಸ ನಡೆದಿರುತ್ತದೆ ಎಂದು

ಹೇಳುತ್ತಿದ್ದೇವೆ. ಇನ್ನು ದೈವಪ್ರತಿನಿಧಿಯಾದ ಭಗವಂತನು ನಮಗೆ ತಿಳಿದು ಎರಡುಬಾರಿ ಹೇಳಿದ್ದರೇ, ನಮಗೆ ತಿಳಿಯದೆ ಎಷ್ಟೋಬಾರಿ ಹೇಳಿದ್ದಾನೆ. ಇನ್ನೂ ನಾವು ಗಮನಿಸಬೇಕಾಗಿರುವ ವಿಷಯವೇನೆಂದರೇ ಆಕಾಶವು ಎಷ್ಟುಬಾರಿ ಹೇಳಿದರೂ ಮೊದಲು ಹೇಳಿರುವ ಜ್ಞಾನವನ್ನೇ ಹೇಳುತ್ತಿರುತ್ತದೆ. ಒಂದೇ ಜ್ಞಾನವನ್ನೇ ಅನೇಕ ವಿಧಗಳಾಗಿ ಬದಲಾಯಿಸಿ ಹೇಳುತ್ತಿರುವುದರಿಂದ ಸರಿಯಾಗಿ ಗ್ರಹಿಸಿಕೊಳ್ಳಲಾರದೆ ಇರುವವರು ಮೊದಲು ಹೇಳಿರುವ ಜ್ಞಾನವು ಬೇರೆ ನಂತರ ಹೇಳಿರುವ ಜ್ಞಾನವು ಬೇರೆಯೆಂದು ಅಂದುಕೊಳ್ಳುವ ಅವಕಾಶವಿದೆ. ಉದಾಹರಣೆಗೆ ಒಂದುಬಾರಿ ಹೇಳಿರುವ ವಾಕ್ಯದಲ್ಲಿ **"ಅಹಂಭಾವವಿಲ್ಲದೇ ಎಷ್ಟು ಜನರನ್ನು ಕೊಂದರೂ ಅವನಿಗೆ ಹತ್ಯಾ ಪಾಪ ಬರುವುದಿಲ್ಲ, ಅವನು ಕೊಲೆಗಾರನಲ್ಲ"** ಎಂದು ಹೇಳಲ್ಪಟ್ಟಿರುವ ಜ್ಞಾನವೇ ಮತ್ತೊಂದುಬಾರಿ ಹೇಳಿದಾಗ ಸ್ವಲ್ಪ ಬದಲಾವಣೆ ಮಾಡಿ **"ಒಬ್ಬ ಸ್ತ್ರೀಯನ್ನು ಮೋಹ (ಕಾಮ) ದೃಷ್ಟಿಯಿಂದ ನೋಡಿದಂತಾದರೇ ಆತನು ವ್ಯಭಿಚರಿಸಿದಂತೆಯೇ ಆಗುತ್ತದೆ"** ಎಂದು ಇರುವುದರಿಂದ ಒಂದುಕಡೆ ಭಾವವಿಲ್ಲದೇ ಮಾಡಿರುವ ಕೆಲಸ ಮಾಡದಂತೆಯೇ ಎಂದು ಹೇಳಿ, ಮತ್ತೊಂದುಕಡೆ ಭಾವದೊಂದಿಗೆ ಮಾಡಿದರೇ ಮಾಡದಿದ್ದರೂ ಮಾಡಿದಂತೆಯೇ ಎಂದು ಹೇಳಿರುವುದರಿಂದ ಈ ಎರಡು ವಾಕ್ಯಗಳಲ್ಲಿರುವುದು ಬೇರೆಬೇರೆ ಜ್ಞಾನವೆಂದು ಅಂದುಕೊಳ್ಳುವ ಅವಕಾಶವಿದೆ. ಎರಡುಕಡೆ ಹೇಳಿರುವುದು ಒಂದೇ ಜ್ಞಾನವೆಂದು ಯಾರೂ ಗುರುತಿಸಲಾರರು. ಇಲ್ಲಿ **ಭಾವವನ್ನು** ಕುರಿತು ಹೇಳಿರುವ ಒಂದೇ ಜ್ಞಾನವನ್ನು ಎರಡು ವಿಧಗಳಾಗಿ ಇದೆಯೆಂದು ಬಹಳಜನ ತಿಳಿಯಲಾರದೆ ಹೋಗಿದ್ದಾರೆ. ಅದೇ ವಿಧವಾಗಿ ಮೊದಲು ಹೇಳಿರುವ ಜ್ಞಾನವೇ ನಂತರ ಎಷ್ಟುಬಾರಿ ಹೇಳಿದರೂ, ಎಷ್ಟು ವಿಧಗಳಲ್ಲಿ ಹೇಳಿದರೂ ಬದಲಾಗದೆ ಇದೆಯೆಂದು ಎಲ್ಲರೂ ಗ್ರಹಿಸಬೇಕಾಗಿದೆ.

ಪ್ರಪಂಚವೆಲ್ಲದಕ್ಕೂ ಒಬ್ಬನೇ ದೇವರು, ಒಂದೇ ಜ್ಞಾನವು ಇದೆಯೆಂದು ಗ್ರಹಿಸಲಾರದ ಮನುಷ್ಯರು ತಮ್ಮತಮ್ಮ ಜ್ಞಾನಗಳು ಬೇರೆಬೇರೆಯೆಂದು ತಿಳಿದು ತಾವು ಬೇರೆಬೇರೆ ಮತಗಳನ್ನು ಸೃಷ್ಟಿಸಿಕೊಂಡಿದ್ದಾರೆ. ಬೇರೆಬೇರೆ ಮತಗಳವರು

ಅವರವರ ದೇವರು ಬೇರೆಯೆಂದು ಅಂದುಕೊಳ್ಳುವುದು ನಡೆಯುತ್ತಿದೆ. ಈ ವಿಧವಾಗಿ ಮುಖ್ಯವಾದ ಮೂರು ಮತದವರು ಅವರವರ ದೇವರುಗಳು ಬೇರೆಬೇರೆಯಾಗಿ ಇದ್ದಾರೆಂದು ಅವರ ದೇವರುಗಳ ಹೆಸರುಗಳು ಬೇರೆಬೇರೆಯಾಗಿ ಹೇಳಿಕೊಳ್ಳುತ್ತಿದ್ದಾರೆ. ವಾಸ್ತವವಾಗಿ ಮೂವರು ದೇವರುಗಳು ಇಲ್ಲ, ಮೂರು ವಿಧಗಳ ಜ್ಞಾನವು ಇಲ್ಲ, ಇರುವುದು ಒಂದೇ ದೇವರು, ಒಂದೇ ಜ್ಞಾನ. ಆದರೇ ದೇವರ ಆಜ್ಞೆಯಿಂದ ಪ್ರವರ್ತಿಸುವ ಮಾಯೆ, ದೇವರ ಅನುಮತಿಯಿಂದಲೇ ಕೆಲವರನ್ನು ದೇವರ ಕಡೆ ಬರದಂತೆ ಮಾಡುವುದಕ್ಕೆ, ಅವರಿಗೆ ಬೇರೆಬೇರೆ ದೇವರುಗಳಾಗಿ, ಬೇರೆಬೇರೆ ಮತಗಳಾಗಿ ಅರ್ಥವಾಗುವಂತೆ ಮಾಡಿದೆ. ಅದರಿಂದ ಬಹಳಜನ ಮನುಷ್ಯರು ತಮಗೆ ತಿಳಿಯದೇನೇ ಮಾಯೆ ಧರ್ಮವಾದ ಮನು ಧರ್ಮಗಳನ್ನು ಆಚರಿಸುತ್ತಿದ್ದಾರೆ. ತಮಗೆ ತಿಳಿಯದೇನೇ ಮತಗಳನ್ನಾಶ್ರಯಿಸಿ ದೇವರಕಡೆ ಹೋಗುತ್ತಿದ್ದೇವೆಂದು ಅಂದುಕೊಳ್ಳುತ್ತಾ ದೇವರಿಗೆ ದೂರವಾಗಿ ಹೋಗುವುದು ನಡೆಯುತ್ತಿದೆ.

ಆದರೇ ದೇವರಿಗೆ ಇಷ್ಟವಾದವರನ್ನು ಮಾತ್ರ ದೇವರಕಡೆ ಹೋಗುವಂತೆ ಮಾಯೆ ಮಾಡುತ್ತಿದೆ. ದೇವರ ಜ್ಞಾನದಮೇಲೆ ಶ್ರದ್ಧೆ ಇರುವವರೆಲ್ಲರನ್ನೂ, ದೇವರ ಮೇಲೆ ಇಷ್ಟತೆ ಹೊಂದಿರುವವರೆಲ್ಲರನ್ನೂ ಮಾಯೆ ಯಾವ ಆತಂಕ ಮಾಡುತ್ತಿಲ್ಲ. ಕೆಲವರಿಗೆ ಜೀವನ ಅನುಭವಗಳಿಂದ ದೇವರ ಜ್ಞಾನದ ಮೇಲೆ ಶ್ರದ್ಧೆ ಬಂದರೂ, ಅವರಿಗೆ ನೂತನವಾಗಿ ಹೇಳಲ್ಪಟ್ಟಿರುವ ಜ್ಞಾನವು ತಿಳಿಯುವುದಕ್ಕೆ ಒಂದೇ ಜ್ಞಾನವು ಅನೇಕಬಾರಿ ಭೂಮಿಮೇಲೆ ಹೇಳಲ್ಪಡುತ್ತಿದೆ. ದೇವರು ತಿಳಿಸಿರುವ ಮೂರು ವಿಧಾನಗಳು ಕೂಡಾ ಅನೇಕಬಾರಿ ನಮ್ಮಮುಂದೆ ಬಂದು ಜ್ಞಾನವನ್ನು ತಿಳಿಸಿ ಹೋಗಿವೆ. ಆಕಾಶವು ಶಬ್ಧರೂಪದಲ್ಲಿ ಎಷ್ಟು ಗುಡುಗುಗಳು ಗುಡುಗಿದರೂ, ಅವುಗಳ ಜ್ಞಾನವು ನಮಗೆ ತಿಳಿಯದೇ ಹೋಗಿದೆ. ಹಾಗೆಯೇ ನಮಗೆ ಕಾಣಿಸದ ತೆರೆಮರೆಯಲ್ಲಿರುವ ಗ್ರಹಗಳು ಸೂಕ್ಷ್ಮವಾಗಿ ಎಷ್ಟುಬಾರಿ ಜ್ಞಾನವನ್ನು ತಿಳಿಸಿದರೂ ಅವುಗಳನ್ನು ಗ್ರಹಿಸಿಕೊಳ್ಳುವ ಶಕ್ತಿ ಮನುಷ್ಯರಿಗೆ ಇಲ್ಲದೇ ಹೋಗಿದೆ. ಗುಡುಗಿನ ಶಬ್ಧವು ಕೇಳಿಸಿದರೂ ಅವುಗಳನ್ನು ಗ್ರಹಿಸುವ ಶಕ್ತಿ

ಆಕಾಶದಲ್ಲಿನ ಗ್ರಹಗಳಿಗೇ ಇರುವುದು. ಹಾಗೆಯೇ ಕಾಣಿಸದ ತೆರೆಮರೆಯಲ್ಲಿರುವ ಸೂಕ್ಷ್ಮವಾಗಿರುವವರು ಹೇಳುವ ಬೋಧನೆಯನ್ನು ಪ್ರವಕ್ತರು ಮಾತ್ರವೇ ಹೇಳುತ್ತಿದ್ದಾರೆ. ದೇವರು ತಿಳಿಸಿರುವ ಮೂರು ವಿಧಗಳಲ್ಲಿ ಬೋಧನೆಗಳ ರೂಪದಲ್ಲಿ ಆಕಾಶವಾಣಿ ಹೇಳುವ ಬೋಧನೆಯನ್ನು ಆಕಾಶ ಗ್ರಹಗಳು, ತೆರೆಮರೆಯಿಂದ ಹೇಳುವ ಬೋಧನೆಗಳನ್ನು ಪ್ರವಕ್ತರು ಯೋಗ್ಯತೆ ಇರುವವರು ಮಾತ್ರತಿಳಿಯಬಲ್ಲರು. ಸಾಧಾರಣ ಮನುಷ್ಯರಲ್ಲಿ ಮಾನವರಾಗಿ ಇರುವವರಾಗಲೀ, ಪ್ರಜೆಗಳಾಗಿ ಇರುವವರಾಗಲೀ ಯಾರಾದರೂ ಮೇಲೆ ಹೇಳಿರುವ ಎರಡು ವಿಧಾನಗಳ ಜ್ಞಾನ ಬೋಧನೆಗಳನ್ನು ತಿಳಿಯಲಾರರು. ಆದಕಾರಣ ಮನುಷ್ಯರು ಯಾರೂ ದೈವಜ್ಞಾನವನ್ನು ತಿಳಿಯುವುದಕ್ಕೆ ಅವಕಾಶವಿಲ್ಲ. ಆದ್ದರಿಂದ ಸಾಧಾರಣ ಮನುಷ್ಯರು ಯಾರಾದರೂ ಜ್ಞಾನವನ್ನು ತಿಳಿಯುವುದಕ್ಕೆ ಅವಕಾಶವಿರುವಹಾಗೆ ಸಾಧಾರಣ ಮನುಷ್ಯನ ಹಾಗೆ ಇರುವವನು ಬೋಧಿಸುವಹಾಗೆ ಏರ್ಪಡಿಸಿರುವ ವಿಧಾನವೇ ದೇವರ ಮೂರನೆಯ ವಿಧಾನ. ದೇವರ ಮೂರನೆಯ ವಿಧಾನದಲ್ಲಿ ದೇವರ ಪ್ರತಿನಿಧಿ ಸ್ವತಃವಾಗಿ ಸಾಧಾರಣ ಮನುಷ್ಯನಹಾಗೆ ಮನುಷ್ಯರ ಮಧ್ಯದಲ್ಲಿ ಬಂದು ದೈವಜ್ಞಾನವನ್ನು ಹೇಳಿ ಹೋಗುವುದು ನಡೆಯುತ್ತಿದೆ. ದೇವರು ಮಾರುವೇಷದಲ್ಲಿ ಬಂದು ತನ್ನನ್ನು ಯಾರೂ ಗುರುತು ಹಿಡಿಯದಂತೆ ಪ್ರಪಂಚದಲ್ಲಿ ಮನುಷ್ಯರ ಮಧ್ಯೆ ಮನುಷ್ಯನಹಾಗೆ ನಟಿಸಿ ಹೋಗುತ್ತಿದ್ದಾನೆ. ಮನುಷ್ಯನಹಾಗೆ ಬಂದುಹೋದ ನಂತರ ಸ್ವಲ್ಪ ಕಾಲಕ್ಕೆ ಕೆಲವರು ಬಂದಿರುವ ವನನ್ನು ಗುರುತಿಸಲಾದರೂ, ಬಂದಿರುವವನು ದೇವರ ಪ್ರತಿನಿಧಿಯೆಂದು ತನ್ನ ಜ್ಞಾನದಲ್ಲಿಯೇ ಹೇಳಿದ್ದಾನೆ. ಪ್ರತಿನಿಧಿಯೆಂದು ಹೇಳಿದರೂ ಅದು ಧರ್ಮ ವಿಧಾನದ ಪ್ರಕಾರ ಹೇಳಿರುವುದು ಮಾತ್ರವೇ ಎಂದು ತಿಳಿಯುತ್ತಿದೆ.

ವಿಶ್ವದಲ್ಲಿ ದೇವರು ಹೊರತು ದೇವರ ಪ್ರತಿನಿಧಿಯಾಗಲೀ, ದೇವರ ಗುಮಾಸ್ತನಾಗಲೀ, ದೇವರ ಕುಮಾರನಾಗಲೀ ಯಾರೂ ಇಲ್ಲವೆಂದು ದೇವರ ಜ್ಞಾನವನ್ನು ಪೂರ್ತಿಯಾಗಿ ಅರ್ಥ ಮಾಡಿಕೊಂಡಿರುವವನಿಗೆ ತಿಳಿಯಬಲ್ಲದು. ದೇವರ ಜ್ಞಾನವನ್ನು ಸಂಪೂರ್ಣವಾಗಿ ಅರ್ಥ ಮಾಡಿಕೊಂಡವನು

ಯಾರಾದರೂ ದೇವರ ಪ್ರತಿನಿಧಿಯಾಗಿ ಬಂದುಹೋದವನು ದೇವರೇ ಹೊರೆತು ಇತರರು ಯರೂ ಅಲ್ಲವೆಂದು ಅರ್ಥ ಮಾಡಿಕೊಳ್ಳಬಲ್ಲನು. ಗತಚರಿತ್ರೆಯಲ್ಲಿ ದೇವರು ಎಷ್ಟುಬಾರಿ ಮನುಷ್ಯನಾಗಿ (ಭಗವಂತನಾಗಿ) ಬಂದು ಹೋಗಿದ್ದಾನೋ ಖಚಿತವಾಗಿ ಹೇಳಲಾರದೆ ಹೋದರೂ ನನಗೆ ತಿಳಿದಿರುವವರೆಗು ಎರಡು ಅವಿನಾಭಾವ ಸಂಬಂಧವಿರುವ ಜನ್ಮಗಳನ್ನು ಗುರುತಿಸಿದ್ದೇವೆ. ಸೃಷ್ಠಿ ಆದಿಯಿಂದ ದೇವರು ಭಗವಂತನಾಗಿ ಎಂದರೇ ಮನುಷ್ಯನ ರೂಪದಲ್ಲಿ ಎಷ್ಟೋ ಬಾರಿ ಬಂದಿರಬಹುದು. ಆದರೇ ಹಿಂದೆ ಹಿಂದೆಯೇ ಬಂದಿರುವ ಜನ್ಮಗಳು, ಎರಡೂ ಒಂದೇ ಹೋಲಿಕೆಯಿರುವ ಜನ್ಮಗಳು ನಮ್ಮ ದೃಷ್ಠಿಗೆ ಬಂದಾಗ ಅವುಗಳನ್ನು ಸುಲಭವಾಗಿ ಗುರುತಿಸಿದ್ದೇವೆ. ಮನುಷ್ಯರಿಗೆ ಜ್ಞಾನವನ್ನು ತಿಳಿಸುವ ನಿಮಿತ್ತ ದೇವರು ಮನುಷ್ಯನಾಗಿ ಒಂದುಬಾರಿಯಲ್ಲದೇ ಎಷ್ಟುಬಾರಿಯಾದರೂ ಬರಬಹುದು. ಎಷ್ಟುಬಾರಿ ಮನುಷ್ಯನಾಗಿ ಬಂದರೂ ಅದು ದೇವರು ಮನುಷ್ಯರಿಗೆ ಜ್ಞಾನವನ್ನು ತಿಳಿಸುವ ಮೂರು ವಿಧಾನಗಳಲ್ಲಿ ಒಂದು ವಿಧಾನವೇ ಆಗುವುದು. ದೇವರು ತನ್ನ ಪ್ರತಿನಿಧಿಯ ಮೂಲಕ ಜ್ಞಾನ ತಿಳಿಸುವೆನೆಂದು ಹೇಳಿರುವ ಪ್ರಕಾರ, ದ್ವಾಪರ ಯುಗದಲ್ಲಿ ದೇವರು ಕೃಷ್ಣನ ರೂಪದಲ್ಲಿ ಬಂದು ಹೋಗಿದ್ದಾನೆ. ಹಾಗೆ ಬರುವುದರಿಂದ ಆತನು ಹೇಳಿರುವ ಜ್ಞಾನವು ಒಂದು ದೇಶಕ್ಕೇ ಪರಿಮಿತಿಯಾಗಿ ಹೋಗಿದೆ. ದ್ವಾಪರಯುಗದ ಕೊನೆಯಲ್ಲಿ ಬಂದಿರುವ ಕೃಷ್ಣನಿಂದ ಸ್ವಲ್ಪ ಜ್ಞಾನ ಮನುಷ್ಯರು ತಿಳಿಯಲಾದರೂ, ಉಳಿದ ದೇಶಗಳಲ್ಲಿ ಆಸಕ್ತಿ ಇರುವವರಿಗೆ ಜ್ಞಾನವನ್ನು ತಿಳಿಸುವ ನಿಮಿತ್ತ ಕೂಡಲೇ ಕಲಿಯುಗ ಆರಂಭದಲ್ಲಿಯೇ ದೇವರು ಎರಡುಬಾರಿ ಬರುವುದು ನಡೆದಿದೆ. ಹತ್ತಿರಹತ್ತಿರದಲ್ಲಿ ಬಂದು ಹೋಗಿರುವುದರಿಂದ, ಪಕ್ಕದ ದೇಶದಲ್ಲಿಯೇ ಅವತರಿಸುವುದರಿಂದ, ಆ ಎರಡು ಜನ್ಮಗಳ ಮೇಲೆ ಸ್ವಲ್ಪ ಆಸಕ್ತಿ ಉಂಟಾಗಿ ಗುರುತಿಸುವುದಕ್ಕೆ ಅವಕಾಶ ಏರ್ಪಟ್ಟಿದೆ.

ಮಾನವನಾಗಿ ಭಗವಂತನ ರೂಪದಲ್ಲಿ ಬರುವನೆಂದು ಕೆಲವರಿಗಾದರೂ ತಿಳಿಯುವುದಕ್ಕೆ ದೇವರು ಅಂತಹ ಅವಕಾಶಕೊಟ್ಟಿದ್ದಾನೆಂದು ಅಂದು

ಕೊಳ್ಳುತ್ತಿದ್ದೇವೆ. ದೇವರು ಭೂಮಿಮೇಲೆ ಮನುಷ್ಯನಾಗಿ ಬರುವನೆಂಬ ವಾದನೆಗೆ ಸಾಕ್ಷಿಯಾಗಿ ಇರುವುದಕ್ಕೆ, ದೇವರು ತನ್ನ ಜನ್ಮಗಳು ತಿಳಿಸುವುದಕ್ಕೆ, ಒಂದೇ ಹೋಲಿಕೆ ಇರುವಂತಹ ಮೂರುಸಾವಿರ ವರ್ಷಗಳಿಗೆ ಎರಡನೆಯ ಜನ್ಮ ತೆಗೆದುಕೊಳ್ಳುವುದು ನಡೆದಿದೆ. ಸಾಧಾರಣವಾಗಿ ದೇವರು ಕೆಲವು ಲಕ್ಷಗಳ ವರ್ಷಗಳಿಗೊಮ್ಮೆ ಬರಬೇಕಾಗಿದ್ದರೇ, ಇಲ್ಲಿ ಎರಡು ಜನ್ಮಗಳಲ್ಲಿ ಕಡಿಮೆ ಅವಧಿಯಲ್ಲಿ ಮೂರು ಸಾವಿರ ವರ್ಷಗಳಿಗೇ ಭಗವಂತನ ಎರಡನೆ ಜನ್ಮ ನಡೆದಿದೆ. ಸಾಮಾನ್ಯವಾಗಿ ಯಾರೂ ಸಹ, ದೇವರ ಜನ್ಮವಾದ ಭಗವಂತನನ್ನು ಗುರುತಿಸಲಾರರು. ದೇವರ ಜನ್ಮವನ್ನು ಗುರುತಿಸುವುದಕ್ಕೆ ಅವಕಾಶವಿಲ್ಲದೇ ಮಾಯೆ ಎಲ್ಲರನ್ನು ಯಾಮಾರಿಸಬಲ್ಲದು. ಯಾರಾದರೂ ಭಗವಂತನನ್ನು ಗುರುತಿಸಿದರೂ, ಅವನಲ್ಲಿ ಅನುಮಾನಗಳನ್ನು ಹುಟ್ಟಿಸಿ ಕೊನೆಗೆ ಅವನಿಂದಲೇ ಆತನು ಭಗವಂತನಲ್ಲ ಎಂದು ಹೇಳಿಸುತ್ತದೆ. ಮಾಯೆ ಮನುಷ್ಯನನ್ನು ಏನಾದರೂ ಮಾಡಬಲ್ಲದು. ಆದ್ದರಿಂದ ದೇವರ ಜನ್ಮವನ್ನು ಗುರುತಿಸದಂತೆ ಮನುಷ್ಯನನ್ನು ಮಾಯೆ ಪ್ರೇರೇಪಿಸುತ್ತಿದೆ. ಮನುಷ್ಯನಿಗೆ ತಿಳಿದಿರುವ ಜ್ಞಾನದಿಂದ ದೇವರಿಗೆ ಜನ್ಮಗಳಿಲ್ಲ, ದೇವರು ಹುಟ್ಟುವವನಲ್ಲ ಎಂದು ವಾದಿಸುವಹಾಗೆ ಮಾಡುತ್ತದೆ.

ಯಾರು ದೇವರಿಗೆ ಇಷ್ಟನಾಗಿರುತ್ತಾನೋ ಅವನಿಗೆ ಮಾತ್ರವೇ ದೇವರು ಭಗವಂತನಾಗಿ ಬರುವನೆಂದು ನಂಬುವಂತೆ ಮಾಯೆ ಮಾಡುತ್ತಿದೆ. ಉಳಿದವರಿಗೆ ಅವರವರ ಮತಗಳ ಜ್ಞಾನವನ್ನು ಪ್ರೇರೇಪಿಸಿ, ನಮ್ಮ ಜ್ಞಾನದಿಂದ ದೇವರು ಹುಟ್ಟುವುದಿಲ್ಲವೆಂದು ತಿಳಿಯುವಂತೆ ಮಾಯೆಯೇ ಮಾಡುತ್ತಿದೆ. ಅಂಥವರು ಎಂದರೇ ಮಾಯೆ ಪ್ರಭಾವದಲ್ಲಿ ಬಿದ್ದವರನ್ನು, ಅವರ ದೈವಗ್ರಂಥಗಳಲ್ಲಿ ದೇವರು ಅವತರಿಸುತ್ತಾನೆಂದು ಹೇಳಿದರೂ, ಆ ಮಾತನ್ನು ಲೆಕ್ಕಿಸದಹಾಗೆ ಅವರನ್ನು ಪ್ರೇರೇಪಿಸಿ ದೇವರು ಹುಟ್ಟುವುದಿಲ್ಲ ಎಂದು ಹೇಳಿಸುತ್ತಿದೆ. ಹಾಗಿರುವಾಗ ನಿಜವಾದ ಸತ್ಯ ಅವರಿಗೆ ತಿಳಿಯದೇ ಹೋಗುತ್ತಿದೆ. ಮಾಯೆ ನಮ್ಮನ್ನು ಮಾತ್ರ ಸಕ್ರಮ ಮಾರ್ಗದಲ್ಲಿ ನಡೆಸಿ ದೇವರಿಗೆ ಜನ್ಮಗಳಿವೆಯೆಂದು ತಿಳಿಯುವಂತೆ ಮಾಡಿದೆ. ಅಷ್ಟೇಅಲ್ಲದೆ ಇಂತಹ ಜನ್ಮಗಳು ದೇವರದೇ ಎಂದು ಗುರುತಿಸುವಂತೆ

ಮಾಡಿದೆ. ಭಗವದ್ಗೀತೆಯಲ್ಲಿ ರಾಜವಿದ್ಯಾ ರಾಜಗುಹ್ಯಯೋಗವೆಂಬ ಅಧ್ಯಾಯದಲ್ಲಿ ಹನ್ನೊಂದನೆಯ ಶ್ಲೋಕವನ್ನು ಗುರುತಾಗಿ ತೋರಿಸಿ ಅದರಿಂದ ದೇವರಿಗೆ ಜನ್ಮಗಳಿರುವಂತೆ ತಿಳಿಸಿದೆ.

**ರಾಜವಿದ್ಯಾ ರಾಜಗುಹ್ಯ ಯೋಗ :–**

**ಶ್ಲೋ॥ 11.** ***ಅವಜಾನನ್ತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್।***
***ಪರಂ ಭಾವ ಮಜಾನನ್ತೋ ಮಮ ಭೂತ ಮಹೇಶ್ವರಮ್॥***

**ಭಾವಾರ್ಥ:– "ಸರ್ವಜೀವರಾಶಿಗಳಿಗು ಮಹೇಶ್ವರನಾಗಿ, ಮಾನವ ಶರೀರವನ್ನು ಧರಿಸಿರುವ ನನ್ನನ್ನು ನೋಡಿ ನನ್ನ ಶ್ರೇಷ್ಠತೆಯನ್ನು ತಿಳಿಯದ ಮಾನವರು ಅಜ್ಞಾನಿಗಳಾಗಿ ನನ್ನನ್ನು ಅವಮಾನಿಸುತ್ತಿದ್ದಾರೆ"**

**ಜ್ಞಾನ ಯೋಗ :–**

**ಶ್ಲೋ॥ 9.** ***ಜನ್ಮ ಕರ್ಮಚ ಮೇ ದಿವ್ಯ ಮೇವಂ ಯೋ ವೇತ್ತಿ ತತ್ತ್ವ ತಃ।***
***ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ! ॥***

**ಭಾವಾರ್ಥ :– ಸ್ವಲ್ಪವಾದರೂ ನನ್ನ ಒಂದು ದಿವ್ಯವಾದ ಜನ್ಮಗಳನ್ನು, ನನ್ನ ಕೆಲಸಗಳನ್ನು ತಿಳಿಯಲಾದ ಮನುಷ್ಯ ಯಾರಾದರೂ ಮರಣಿಸಿದ ನಂತರ ಅವನು ಪುನರ್ಜನ್ಮ ಹೊಂದುವುದಿಲ್ಲ. ಅಂಥವನು ನನ್ನೊಳಗೆ ಐಕ್ಯವಾಗುವನು, ನಾಶವಿಲ್ಲದ ಮೋಕ್ಷವನ್ನು ಪಡೆಯುವನು.**

ಈ ಎರಡು ಶ್ಲೋಕಗಳ ಭಾವವನ್ನು ನೋಡಿದ ನಂತರ ದೇವರಿಗೆ ಜನ್ಮಗಳಿಲ್ಲವೆಂದು, ದೇವರು ಹುಟ್ಟುವುದಿಲ್ಲವೆಂದು ಯಾರೂ ಹೇಳುವುದಿಲ್ಲ. ಈ ವಿಷಯವು ಪ್ರಥಮ ದೈವಗ್ರಂಥದಲ್ಲಿರುವಾಗ, ಉಳಿದ ಎರಡು ಗ್ರಂಥಗಳಲ್ಲಿ ಕೂಡಾ ದೇವರು ಹುಟ್ಟುವನೆಂಬ ಬೋಧನೆಯೇ ಇದೆ. ಆದರೇ ಮಾಯೆ ಪ್ರಭಾವದಿಂದ ಕೆಲವರಿಗೆ ಆ ವಿಷಯವೇ ಅರ್ಥವಾಗಲಿಲ್ಲ. ಅವರ ವಿಷಯವನ್ನು ಬಿಟ್ಟು, ದೇವರು ಹುಟ್ಟುವನೆಂದು ನಾವು ಹೇಳಿಕೊಂಡರೇ, ಸ್ವಲ್ಪಮಟ್ಟಿಗೆ ದೊಡ್ಡ

ಜ್ಞಾನವು ತಿಳಿದಂತೆಯೇ ಆಗುವುದು. ಪ್ರಪಂಚವೆಲ್ಲದಕ್ಕೂಸ ದೇವರು ಒಬ್ಬನೇ ವಿಶ್ವರಾಜ್ಯಾಧಿಪತಿಯಾಗಿ ಇದ್ದಾನೆ. ನಾವು ಈಗ ಆತನನ್ನು ದೇವರೆಂದು ಹೇಳುತ್ತಿದ್ದರೂ ಸೃಷ್ಠಿ ಆದಿಯಲ್ಲಿಯೇ ಆತನಿಗೆ **ಸೃಷ್ಠಿಕರ್ತ, ಪರಮಾತ್ಮ, ಅಲ್ಲಾಹ್** ಎಂಬ ಮೂರು ಬಿರುದುಗಳು ಇವೆ. ಆತನೇ ಈಗ ನಾವು ಹೇಳುತ್ತಿರುವ ದೇವರೆಂದು ತಿಳಿಯಬೇಕು.

'ಕೆಲಸವನ್ನು ಅನುಸರಿಸಿ ಬಿರುದು ಇರುತ್ತದೆ' ಎಂಬ ಸೂತ್ರದ ಪ್ರಕಾರ ದೇವರು ಇರುವ ವಿಧಾನವನ್ನು ಅನುಸರಿಸಿ ಆತನಿಗೆ ಆದಿನವೇ ಸೃಷ್ಠಿ ಆದಿಯಲ್ಲಿಯೇ ಬಿರುದುಗಳು ಲಭ್ಯವಾಗಿವೆ. ಹುಡುಕಲ್ಪಡುವವನು ದೇವರು ಎಂದಹಾಗೆ, ಸೃಷ್ಠಿಯನ್ನು ಸೃಷ್ಠಿಸಿರುವ ಏಕೈಕ ಕರ್ತನಾಗಿರುವುದರಿಂದ ದೇವರನ್ನು **"ಸೃಷ್ಠಿಕರ್ತ"** ಎಂದು ಹೇಳಲ್ಪಟ್ಟಿದೆ. ಹಾಗೆಯೇ ಆತ್ಮಗಿಂತಲೂ ಬೇರೆಯಾಗಿ ಇರುವವನು ದೇವರು ಆಗಿರುವುದರಿಂದ ಅದೇ ಅರ್ಥದೊಂದಿಗೆ **"ಪರಮಾತ್ಮ"** ಎಂದು ಹೇಳುವುದು ನಡೆದಿದೆ. ಆತ್ಮಗಿಂತಲೂ ಪರವಾಗಿ ಇರುವವನೆಂದು ಅದರ ಅರ್ಥವೆಂದು ಬಹಳಜನರಿಗೆ ತಿಳಿಯದೆ ಅದೊಂದು ಹೆಸರೆಂದು ಕೆಲವರು ಅಂದುಕೊಳ್ಳುವುದಾಗಿದೆ. ಹಾಗೆಯೇ ಈದಿನ ಮುಸ್ಲೀಮ್‌ಗಳ ದೇವರ ಹೆಸರೆಂದು ಎಲ್ಲರೂ ಅಂದುಕೊಳ್ಳುವ **"ಅಲ್ಲಾಹ್"** ಎಂಬ ಬಿರುದು ಸೃಷ್ಠಿ ಆದಿಯಲ್ಲಿಯೇ ಅರ್ಥಸಹಿತವಾಗಿ ಇರುತ್ತಿತ್ತು. "ಲ್ಲಾಹ್" ಎಂದರೇ ಅಂತ್ಯ ಎಂದು, ತೀರ ಎಂದು ಹೇಳಬಹುದು. "ಅಲ್ಲಾಹ್" ಎಂದರೇ ಅಂತ್ಯವಿಲ್ಲದವನು ಎಂದು ಅರ್ಥವನ್ನು ಕೊಡುವುದು. **"ಅಲ್ಲಾಹ್" ಪದದ ಒಂದು ಅರ್ಥವು ಸ್ವಚ್ಛವಾದ ತೆಲುಗು ಭಾಷೆಯಲ್ಲಿನದೆಂದು ಕೂಡಾ ಬಹಳಜನರಿಗೆ ತಿಳಿದಿಲ್ಲ.** ಪೂರ್ವವೇ ಸೃಷ್ಠಿ ಆದಿಯಲ್ಲಿಯೇ ಅರ್ಥದೊಂದಿಗೆ ಕೂಡಿಕೊಂಡಿರುವ ಬಿರುದಾಂಕಿತನು ದೇವರೆಂದು ಯಾರಿಗೂ ತಿಳಿಯದೆ ದೇವರಿಗೆ ಹೆಸರುಗಳಿವೆ ಯೆಂದು ಎಲ್ಲರೂ ಅಂದುಕೊಳ್ಳುವುದು ನಡೆದಿದೆ. ದೇವರಿಗೆ ಹೆಸರುಗಳಹಾಗೆ ಇರುವವೆಲ್ಲಾ ಬಿರುದುಗಳೇಯೆಂದು, ಹೆಸರು ಒಂದೂ ಸಹ ಇಲ್ಲವೆಂದು ತಿಳಿದವರಿಗೆ ದೇವರು ನಾಮ ರಹಿತನೆಂದು ತಿಳಿಯಬಲ್ಲರು. ಹುಡುಕಲ್ಪಡುವವನೇ

ಹೊರತು ಕಾಣಿಸುವವನಲ್ಲ ಎಂದು ತಿಳಿದಿರುವವರಿಗೇ ದೇವರು ರೂಪವಿಲ್ಲದವನೆಂದು ತಿಳಿಯಬಲ್ಲದು. ಚೈತನ್ಯವಂತವಾಗಿ ಎಲ್ಲ ಕಾರ್ಯಗಳು ಮಾಡುವ ಆತ್ಮವೂ ಅಲ್ಲದೇ, ಆತ್ಮಗಿಂತಲೂ ಬೇರೆಯಾಗಿ ಸಾಕ್ಷಿಯಾಗಿ ದೇವರಿದ್ದಾನೆಂದು ತಿಳಿದಿರುವವರಿಗೇ ಪರಮಾತ್ಮನೆಂದರೆ ಕ್ರಿಯಾರಹಿತನೆಂದು ತಿಳಿಯಬಲ್ಲದು.

ರೂಪ, ನಾಮ, ಕ್ರಿಯಾರಹಿತನಾದ ದೇವರು ಖುರಾನ್ ಗ್ರಂಥದಲ್ಲಿ 42ನೇ ಸೂರಾ, 51ನೇ ಆಯತ್‌ನಲ್ಲಿ ಹೇಳಿದಂತೆ **"ತನಗೆ ಹೊರತು ಇತರರಿಗೆ ತಿಳಿಯದ ತನ್ನ ಜ್ಞಾನವನ್ನು ತಾನೇ ಪರೋಕ್ಷವಾಗಿ ಮೂರು ವಿಧಗಳಲ್ಲಿ ತಿಳಿಸುತ್ತೇನೆಂದು"** ಹೇಳಿದಂತೆ ತನ್ನ ಸೃಷ್ಠಿಯಲ್ಲಿ ಆಕಾಶ ಗುಡುಗಿನ ಮೂಲಕ ಒಂದು ವಿಧವಾಗಿ, ಸೂಕ್ಷ್ಮ ರೂಪವಾಗಿ ಮತ್ತೊಂದು ವಿಧವಾಗಿ ತಿಳಿಸಿದರೂ, ಆ ಬೋಧನೆ ನೇರವಾಗಿ ಮನುಷ್ಯರಿಗೆ ಸೇರದೆ ಆಕಾಶದಲ್ಲಿನ ಗ್ರಹಗಳಿಗೆ ಆಕಾಶ ಬೋಧನೆ, ಸೂಕ್ಷ್ಮವನ್ನು ಗ್ರಹಿಸುವ ಪ್ರವಕ್ತರಿಗೆ ತೆರೆಮರೆಯಿಂದ ತಿಳಿಸಿರುವ ಬೋಧನೆ ಸೇರಿಹೋಗಿರುವಾಗ, ದೇವರು ಹೇಳಿರುವುದು ಹೇಳಿದಂತೆಯೇ ಮನುಷ್ಯರಿಗೆ ಸೇರದೇ ಹೋಗಿರುವುದರಿಂದ, ಕೊನೆಗೆ ಪ್ರವಕ್ತರು ಮನುಷ್ಯರಿಗೆ ತಿಳಿಸಿರುವ ಜ್ಞಾನವು ಕೂಡಾ ಸ್ವಲ್ಪ ಕಾಲಕ್ಕೆ ಕಲುಷಿತವಾಗಿ ಹೋಗುವುದಕ್ಕೆ ಅವಕಾಶವಿರುವುದರಿಂದ, ದೇವರ ಪ್ರತಿರೂಪವಾದ (ಪ್ರತಿನಿಧಿಯಾದ) ಭಗವಂತನ ಮೂಲಕ ಮೂರನೆಯ ವಿಧಾನವನ್ನು ಅನುಸರಿಸಿ ಪ್ರಜೆಗಳಿಗೆ ಜ್ಞಾನವನ್ನು ಹೇಳುವುದು ನಡೆದಿದೆ. ಆಕಾಶದಿಂದ ಹೇಳಿದಾಗಾಗಲೀ, ತೆರೆಮರೆಯಿಂದ ಸೂಕ್ಷ್ಮ ರೂಪದಲ್ಲಿ ಹೇಳಿದಾಗಾಗಲೀ ದೇವರನ್ನು ಗುರುತಿಸುವುದಕ್ಕೆ ಅವಕಾಶವಿಲ್ಲ. ಆದರೇ ಮೂರನೆಯ ವಿಧಾನವಾದ ದೇವರ ಪ್ರತಿನಿಧಿ ಬಂದು ಜ್ಞಾನವನ್ನು ಬೋಧಿಸಿದಾಗ ನೇರವಾಗಿ ಪ್ರಜೆಗಳಿಗೇ ಬೋಧಿಸುತ್ತಾ, ಮನುಷ್ಯರೊಂದಿಗೆ ಸಂಬಂಧಪಟ್ಟು, ಮನುಷ್ಯರ ಮಧ್ಯದಲ್ಲಿಯೇ ಇರುವುದರಿಂದ, ಬಂದಿರುವ ಪ್ರತಿನಿಧಿಯನ್ನು ಅನುಸರಿಸಿ ದೇವರ ನಿಜ ಭಾವವನ್ನು ಸ್ವಲ್ಪಮಟ್ಟಿಗೆ ತಿಳಿಯುವುದಕ್ಕೆ ಅವಕಾಶವಿದೆ. ಆದ್ದರಿಂದ ಈಗ ನಾವು ದೇವರಿಂದ ಕಳುಹಿಸಲ್ಪಟ್ಟ ದೇವರ ಪ್ರತಿನಿಧಿಯನ್ನು ಕುರಿತಾಗಿಯೇ ಚರ್ಚಿಸಿಕೊಳ್ಳೋಣ.

ಅಂತಿಮ ದೈವಗ್ರಂಥವಾದ ಖುರಾನ್ ಗ್ರಂಥದಲ್ಲಿ ಸೂರಾ 42, ಆಯತ್ 51ರಲ್ಲಿ ಹೇಳಿರುವ ವಿಷಯದಲ್ಲಿ ಕೊನೆಯ ವಾಕ್ಯದಲ್ಲಿ **"ತಾನು ಕೋರಿರುವುದು ತನ್ನ ಆಜ್ಞೆಯೊಂದಿಗೆ ಸೂಚಿಸುವುದಕ್ಕೆ ತನ್ನ ಪ್ರತಿನಿಧಿಯನ್ನು ಕಳುಹಿಸುತ್ತಾನೆ"** ಎಂದು ಇದೆ. ಅಷ್ಟೇ ಅಲ್ಲದೆ ಅದೇ ಮಾತಿನ ಕೊನೆಯಲ್ಲಿ ಮತ್ತೊಂದು ಮುಖ್ಯವಾದ ಮಾತು ಹೇಳಿರುವುದಾಗಿದೆ. ಅದು ಏನೆಂದರೇ! ಹಾಗೆ ತನ್ನ ಪ್ರತಿನಿಧಿಯಾಗಿ ಬಂದಿರುವವನು **"ಮಹೋನ್ನತನು, ಎಷ್ಟೋ ವಿವೇಕವಂತನು"** ಎಂದು ಹೇಳಿರುವುದಾಗಿದೆ. ದೇವರು ರೂಪ, ನಾಮ, ಕ್ರಿಯಾ ರಹಿತನು. ಅಷ್ಟೇಅಲ್ಲದೆ ಆತನು ಹುಡುಕಿದರೇ ಕಾಣಿಸುವವನಲ್ಲ. ಕೆಲಸಮಾಡುವ ಆತ್ಮವೂಅಲ್ಲ (ಪರಮಾತ್ಮ), ಅಂತ್ಯವಾಗಲಿ, ಹದ್ದಾಗಲೀ ಇಲ್ಲದವನು (ಅಲ್ಲಾಹ್) ಯಾವ ಊಹೆಗೂ ತಿಳಿಯದವನು ಆಗಿರುವುದರಿಂದ ದೇವರನ್ನು ಪ್ರತ್ಯಕ್ಷವಾಗಿ ಯಾರೂ ತಿಳಿಯಲಾರರು. ಆದರೇ ದೇವರು ತನ್ನ ಪ್ರತಿನಿಧಿಯನ್ನು ಕಳುಹಿಸುತ್ತೇನೆಂದು ಹೇಳಿ ಕಳುಹಿಸಿದಾಗ ಬಂದಿರುವವನು ದೇವರ ಪ್ರತಿನಿಧಿಯಾಗಿ ಇದ್ದರೂ, ಆತನು ದೇವರೇಯೆಂದು ನಮಗೆ ಜ್ಞಾನದಿಂದ ಅರ್ಥವಾದಾಗ, ಆತನ ಪ್ರತಿನಿಧಿಯಾದ ಭಗವಂತನನ್ನು ಮಾನವಾಕಾರದಲ್ಲಿ ನೋಡಿದಾಗ, ಆತನ ಮೂಲಕ ದೇವರ ಭಾವವನ್ನು ತಿಳಿಯುವುದಕ್ಕೆ ಅವಕಾಶವಿದೆ.

ಖುರಾನ್ ವಾಕ್ಯದಲ್ಲಿ ಕೊನೆಯಾಗಿ ಹೇಳಿರುವ ಮಾತುಗಳಲ್ಲಿ ಇನ್ನೂ ಕೊನೆಯಾಗಿ ಇರುವ ಮಾತುಗಳಲ್ಲಿ ಆತನು **"ಮಹೋನ್ನತನು, ಎಷ್ಟೋ ವಿವೇಕವಂತನು"** ಎಂದು ಇದೆ. ಅಲ್ಪಬುದ್ಧಿಯಿರುವ ಮನುಷ್ಯರ ಪಕ್ಕದಲ್ಲಿ ದೇವರ ಪ್ರತಿನಿಧಿಯಾಗಿ ಬಂದಿರುವವನನ್ನು ನೋಡಿದರೇ ಅಲ್ಪಬುದ್ಧಿಯಿರುವ ಮನುಷ್ಯರಿಗಿಂತಲೂ, ಕಾಣಿಸುವ ಮನಷ್ಯನಾಗಿರುವ ಭಗವಂತನು 'ಎಷ್ಟೋ ಉನ್ನತನಾದವನು' ಎಂದು ತಿಳಿಯುತ್ತಿದೆ. ಹಾಗೆಯೇ ಕಾಣಿಸುವ ಮನುಷ್ಯರ ವಿವೇಕ(ತಿಳುವಳಿಕೆ)ಗಿಂತಲೂ ಭಗವಂತನ ವಿವೇಕವು ಎಷ್ಟೋ ಶ್ರೇಷ್ಠ ವಾಗಿರುತ್ತದೆ. ಆದ್ದರಿಂದ ಆತನನ್ನು 'ಎಷ್ಟೋ ವಿವೇಕವಂತನು' ಎಂದು ಹೇಳುವುದಾಗಿದೆ.

ಕಾಣಿಸುವ ಮನುಷ್ಯನಾಗಿರುವ ಭಗವಂತನನ್ನು ಕಾಣಿಸುವ ಮನುಷ್ಯರೊಂದಿಗೆ ಹೋಲಿಸಿ ನೋಡಿದಾಗ ದೇವರ ಪ್ರತಿರೂಪವಾದ ಅಥವಾ ದೇವರ ಪ್ರತಿನಿಧಿಯಾದವನು ಮನುಷ್ಯರ ಭಾವಕ್ಕಿಂತಲೂ ಉನ್ನತವಾದ ಭಾವ ವಿರುವವನೆಂದೂ, ಮನುಷ್ಯರ ವಿವೇಕಗಿಂತಲೂ ಎಷ್ಟೋ ಹೆಚ್ಚು ವಿವೇಕ ಇರುವವನೆಂದು ತಿಳಿಯುತ್ತಿದೆ. ಕಾಣಿಸದ ದೇವರು ಕಾಣಿಸುವ ಮನುಷ್ಯನಾಗಿ ಬಂದಾಗ ಮಾತ್ರವೇ ಆತನನ್ನು ಮಹೋನ್ನತನು, ಎಷ್ಟೋ ವಿವೇಕವಂತನೆಂದು ಹೇಳುವುದಕ್ಕೆ ಅವಕಾಶವಿರುವುದು. ಅದೇ ದೇವರನ್ನು ಹಾಗೆ ಹೇಳುವುದಕ್ಕೆ ಸಾಧ್ಯವಿಲ್ಲ. ದೇವರು ಕಾಣಿಸದವನು, ಯಾವುದೂ ಅಲ್ಲದವನು ಆದ್ದರಿಂದ ಆತನನ್ನು ಯಾರೊಂದಿಗೆಯೂ ಹೋಲಿಸಿ ನೋಡುವುದಕ್ಕೆ ಅವಕಾಶವಿಲ್ಲ. ಆದ್ದರಿಂದ ದೇವರನ್ನು ಉನ್ನತನೆಂದು ಹೇಳುವುದಕ್ಕೆ, ವಿವೇಕವಂತನೆಂದು ಹೇಳುವುದಕ್ಕೆ ಅವಕಾಶವಿಲ್ಲ. ಯಾವುದೂ ಅಲ್ಲದವನನ್ನು ಏನೆಂದೂ ಹೇಳಲಾರೆವು.

ದೇವರು ಅವತರಿಸಿ ಮಾನವ ರೂಪದಲ್ಲಿ ಬಂದಾಗ ಆತನನ್ನು ಮನುಷ್ಯ ಎಂದು ಅನ್ನಬಾರದು. ದೇವರು ಮಾನವನಾಗಿ ನಮ್ಮ ಮಧ್ಯದಲ್ಲಿದ್ದರೂ ಆತನನ್ನು ಮಾನವನೆಂದಾಗಲೀ, ಮನುಷ್ಯನೆಂದಾಗಲೀ, ಪ್ರಜೆ ಎಂದಾಗಲೀ ಹೇಳುವುದಕ್ಕೆ ಸಾಧ್ಯವಿಲ್ಲ. ಏಕೆಂದರೇ! ಪ್ರತ್ಯಕ್ಷವಾಗಿ ಮನುಷ್ಯನಹಾಗೆ ಕಾಣಿಸಿದರೂ ಆತನು ಮನುಷ್ಯನಲ್ಲ, ಆತನನ್ನು ಮನುಷ್ಯ ಎಂದು ಅನ್ನಬಾರದು. ಪ್ರಸ್ತುತವಾಗಿ ಆತನು ಭೂಮಿಮೇಲೆ ಇರುವಾಗ ಆತನು ದೇವರ ಅವತಾರವೆಂದು ತಿಳಿಯದೆ ಹೋಗಿರುವುದರಿಂದ ತಿಳಿಯದೆ ಮನುಷ್ಯನಾಗಿ ಹೋಲಿಸಿಕೊಂಡರೂ, ನಂತರ ಯಾವಗಲಾದರೂ ಆತನು ದೇವರ ಅವತಾರವೆಂದು ತಿಳಿದ ನಂತರ ಭಗವಂತನೆಂದು ಹೇಳಬೇಕು. ಭಗವಂತನೆಂಬ ಹೆಸರು ಒಬ್ಬ ದೇವರ ಅವತಾರಕ್ಕೆ ಮಾತ್ರವೇ ಇರುತ್ತದೆ. ಅಂತಹ ಅವತಾರಗಳು ನನಗೆ ಎರಡು ತಿಳಿದಿವೆ. ಆದ್ದರಿಂದ ಈಗ ನಾನು ಅವರನ್ನು ಭಗವಂತನೆಂದು ಹೇಳುತ್ತಿದ್ದೇನೆ. ತಿಳಿಯದೆ ಇರುವಾಗ ಭಗವಂತನನ್ನು ಯಾರೂ ಗುರುತಿಸದೆ ಇರುವಾಗ ಆತನನ್ನು ಹೇಗೆ ಕರೆದರೂ

ಪರವಾಗಿಲ್ಲ. ಆದರೇ ಆತನ ಜನ್ಮವನ್ನು ಕುರಿತು ತಿಳಿದ ನಂತರ ದೇವರ ಜನ್ಮವನ್ನು ತಪ್ಪದೇ ಭಗವಂತನೆಂದು ಕರೆಯಬೇಕು ಹಾಗೆ ಕರೆದಾಗಲೇ ದೇವರ ಜನ್ಮವನ್ನು ಕುರಿತು ತಿಳಿದವರಾಗುತ್ತಾರೆ.

**ಪ್ರಶ್ನೆ:– ಭಗವಂತನೆಂದು ದೇವರ ಜನ್ಮವನ್ನು ಅನ್ನಬೇಕೆಂದು ನೀವು ಹೇಳುತ್ತಿದ್ದೀರ. ನೀವು ಹೇಳುವ ಪ್ರಕಾರವಾದರೇ ದೇವರ ಜನ್ಮ ಭೂಮಿ ಮೇಲೆಬಹಳ ಅಪರೂಪವಾಗಿ ನಡೆಯುತ್ತಿರುತ್ತದೆಂದು ತಿಳಿಯುತ್ತಿದೆ. ಭಗವದ್ಗೀತೆಯಲ್ಲಿ ಕೂಡಾ ಅಧರ್ಮಗಳು ಹೆಚ್ಚಾಗಿ ಧರ್ಮಗಳಿಗೆ ಮುಪ್ಪು ಏರ್ಪಟ್ಟಾಗ ಮಾತ್ರವೇ ದೇವರು ಅವತರಿಸಿ ಧರ್ಮ ಪ್ರತಿಷ್ಠಾಪನೆ ಮಾಡುವನೆಂದು ಹೇಳಿದ್ದೀರ. ಇದೆಲ್ಲವನ್ನೂ ನೋಡಿದರೇ ಕೆಲವು ಲಕ್ಷಗಳ ವರ್ಷಗಳಿಗೋ, ಕಡಿಮೆ ಎಂದರೇ ಕೆಲವು ಸಾವಿರ ವರ್ಷಗಳಿಗೆ ಒಂದುಬಾರಿ ದೇವರ ಜನ್ಮ ಇರಬಹುದೆಂದು ತಿಳಿಯುತ್ತಿದೆ. ಹೀಗೆ ಎಷ್ಟೋ ಕಾಲಕ್ಕೆ ಒಂದುಬಾರಿ ದೇವರ ಜನ್ಮವಿದ್ದರೂ ಅದನ್ನು ಮನುಷ್ಯರು ಗುರುತಿಸುವುದು ಬಹಳ ದುರ್ಲಭ. ಭಗವಂತನ ಜನ್ಮ ಅಪರೂಪವಾಗಿರುವಾಗ, ಭಗವಂತನ ಗುರುತು ಭಾರವಾದಾಗ ಈದಿನ ಭೂಮಿಮೇಲೆ ಎಷ್ಟೋಜನರು 'ಭಗವಾನ್' ಎಂಬ ಹೆಸರು ಹೊಂದಿರುವವರು, 'ಭಗವಾನ್' ಎಂದು ಕರೆಯಿಸಿಕೊಳ್ಳುವವರು ಬಹಳಜನ ಕಾಣಿಸುತ್ತಿದ್ದಾರೆ. ಇವರಲ್ಲಿ ಯಾರು ಭಗವಂತ ನೆಂದು ನಾವು ಅಂದುಕೊಳ್ಳಬೇಕು? ಭೂಮಿಮೇಲೆ ಭಗವಂತನು ಇರುವಾಗ ತಿಳಿಯುವುದಿಲ್ಲ. ಆತನು ಬಂದು ಹೋದ ಎಷ್ಟೋ ವರ್ಷಗಳಿಗಾದರೂ, ಆತನು ಮಾಡಿರುವ ಕೆಲಸಗಳನ್ನು ಅನುಸರಿಸಿ, ಹೇಳಿರುವ ಜ್ಞಾನವನ್ನು ಅನುಸರಿಸಿ ಇಂಥವನು ಭಗವಂತನೆಂದು ಗುರುತು ಹಿಡಿಯುವುದಕ್ಕೆ ಅವಕಾಶವಿರುತ್ತದೆ. ಅಂತಹ ಎಷ್ಟೋ ಕಷ್ಟವಾಗಿರುವುದಾಗಿ ಭಗವಂತನ ಗುರುತು ಇರುವಾಗ, ಪ್ರತ್ಯಕ್ಷವಾಗಿ ಕಾಣಿಸುವ ಭಗವಂತರು ಇಷ್ಟುಜನ ಇರುವುದನ್ನು ನೋಡಿನೀವೇನು ಹೇಳುತ್ತೀರ? ಒಬ್ಬ ದೊಡ್ಡ ಸ್ವಾಮೀಜಿ ಹತ್ತಿರದಿಂದ ಸಾಧಾರಣ ಮನುಷ್ಯನ ವರೆಗು ಅವರ ಹೆಸರಿಗೆ ಮೊದಲೋ ಅಥವಾ ಹಿಂದೆಯೋ ಭಗವಾನ್ ಎಂಬ ಹೆಸರು ಅಂಟಿಸಿಕೊಂಡಿದ್ದಾರೆ. ಇವರು ನಿಜವಾಗಿ ಭಗವಂತರಾ ಅಥವಾ ಇನ್ನೂ ಏನಾದರೂ ಅರ್ಥವಿದೆಯಾ ?**

**ಉತ್ತರ:–** ಭೂಮಿ ಮೇಲೆ ಪ್ರತ್ಯಕ್ಷವಾಗಿ ಬದುಕಿರುವವರು ಭಗವಂತನೆಂಬ ಹೆಸರನ್ನು ಅವರ ಹೆಸರಿನ ಮುಂದೆಯೋ ಹಿಂದೆಯೋ ಇಟ್ಟುಕೊಂಡಿರುವುದು ನಿಜ. ನೀನು ಕೇಳಿದಹಾಗೆಯೇ ನಾನು ಒಬ್ಬ ಸ್ವಾಮೀಜಿಯನ್ನು ನೀನು ಭಗವಂತನಾ? ಎಂದು ಕೇಳಿದೆನು. ಆ ಸ್ವಾಮೀಜಿ ತನ್ನ ಹೆಸರಿಗಿಂತ ಮೊದಲೇ ಭಗವಾನ್ ಎಂದು ಹೇಳಿಕೊಳ್ಳುವುದು ನಡೆಯುತ್ತಿತ್ತು. ಆತನ ಹೆಸರು "ಭಗವಾನ್ ಗೋಪಿಕಾ ಶ್ರೀವರ್ಧನ್ ಸ್ವಾಮೀಜಿ" ಎಂದು ಇರುತ್ತಿತ್ತು. ಆತನು ಉತ್ತರ ದೇಶದ ಸ್ವಾಮೀಜಿ ಆಗಿರುವುದರಿಂದ ಹಿಂದೀ ಭಾಷೆಯನ್ನೇ ಮಾತನಾಡುತ್ತಿದ್ದನು. ಆಗ ಆತನು ನನ್ನೊಂದಿಗೆ ಈ ವಿಧವಾಗಿ ಮಾತನಾಡಿದನು.

**ಭಗವಾನ್:–** ನಾನು 'ಭಗವಾನ್' ಎಂಬ ಹೆಸರನ್ನು ನನ್ನ ಹೆಸರಿನ ಮೊದಲು ಇಟ್ಟುಕೊಂಡರೇ ನಿನಗೆ ಏನೆನಿಸಿದೆ? ಕೆಟ್ಟದಾಗಿ ಏನಾದರೂ ಕಾಣಿಸಿದೆಯಾ? ನೀನು ಭಗವಾನ್‌ನೇನಾ ಎಂದು ಯಾಕೆ ಪ್ರಶ್ನಿಸಿದ್ದೀಯಾ?

**ನಾನು:–** ದೇವರು ಭೂಮಿಮೇಲೆ ಹುಟ್ಟಿದಾಗ ಆತನನ್ನು ಭಗವಂತ ಎನ್ನುವುದು ಸಹಜ. ಜ್ಞಾನವನ್ನು ತಿಳಿದವರು ಮಾತ್ರವೇ ಭಗವಂತನ ಜನ್ಮವನ್ನು ಗರುತಿಸಿ, ಮನುಷ್ಯನಾಗಿ ಬಂದಿರುವ ದೇವರನ್ನು ಭಗವಂತನೆಂದು ಅನ್ನಬಹುದು. ಅಂತಹ ಭಗವಾನ್' ಎಂಬ ಹೆಸರನ್ನು ನೀವು ಇಟ್ಟುಕೊಳ್ಳುವುದರಿಂದ ಅದರ ವಿಷಯವೇ ನೆಂದು, ಯಾಕೆ ಹಾಗೆ ಇಟ್ಟುಕೊಂಡಿದ್ದೀರೆಂದು ಕೇಳಿದೆವು.

**ಭಗವಾನ್:–** ಕೃಷ್ಣನು ಹುಟ್ಟಿದಾಗ ಆತನಿಗೆ "ಭಗವಾನ್" ಎಂಬ ಹೆಸರಿಲ್ಲ. ಆತನ ನಂತರ ಸ್ವಲ್ಪ ಕಾಲಕ್ಕೆ ಆತನನ್ನು ಭಗವಾನ್ ಎಂದು ಎಲ್ಲರೂ ಅನ್ನುವುದು ನಡೆದಿದೆ. 'ಭಗವಾನ್' ಎಂಬ ಪದದಲ್ಲಿ ಅರ್ಥವನ್ನು ಪರಿಶೀಲಿಸಿದರೇ 'ಭಗವು' ಎಂದರೇ 'ಸ್ತ್ರೀಯೊಂದರ ಗರ್ಭ' ಎಂದು ಅರ್ಥ. ಗರ್ಭದಿಂದ ಹುಟ್ಟಿರುವವನು ಆದಕಾರಣ ಆತನನ್ನು ಭಗವಂತನು' ಎಂದು ಹೇಳಿದ್ದಾರೆ. ಮೊದಲು ಶ್ರೀಕೃಷ್ಣನನ್ನು ಮನುಷ್ಯನಲ್ಲ ದೇವರೆಂದು, ಆತನು ತಾಯಿ ಗರ್ಭದಿಂದ ಹುಟ್ಟಲಿಲ್ಲವೆಂದು, ಕೃಷ್ಣನು ಆಕಾಶದಿಂದ ಶಿಶುವಾಗಿ ಭೂಮಿಮೇಲಕ್ಕೆ ಬಂದಿದ್ದಾನೆಂದು ಎಲ್ಲರೂ

ಅಂದುಕೊಳ್ಳುತ್ತಿದ್ದರು. ಆದರೇ ಸ್ವಲ್ಪ ಕಾಲಕ್ಕೆ ಕೃಷ್ಣನು ಆಕಾಶದಿಂದ ಇಳಿದು ಬರಲಿಲ್ಲವೆಂದು, ದೇವಕೀದೇವಿ ಗರ್ಭದಿಂದ ಹುಟ್ಟಿಬಂದಿದ್ದಾನೆಂದು ಎಲ್ಲರಿಗೂ ತಿಳಿದು ಹೋಗಿದೆ. ಆಗ ಎಲ್ಲರೂ ಕೃಷ್ಣನನ್ನು 'ಶ್ರೀಕೃಷ್ಣ ಭಗವಾನ್' ಎಂದು ಕರೆದಿದ್ದಾರೆ. ಅದು ಕೃಷ್ಣನ ವಿಷಯವಾಗಿರುವಾಗ, ನನ್ನ ವಿಷಯದಲ್ಲಿ ನಾನು ತಾಯಿ ಗರ್ಭದಿಂದ ಹುಟ್ಟಿದ್ದೇನೆಂದು ನನಗೆ ಚೆನ್ನಾಗಿ ತಿಳಿದಿದೆ, ನಾನು ಮೊದಲು ತಾಯಿ ಗರ್ಭದಿಂದ ಹುಟ್ಟಿದ ನಂತರ ನನಗೆ ಹೆಸರಿಟ್ಟರು. ಈಗ ಸ್ವಾಮೀ ಎಂದು ಕರೆಯುತ್ತಿದ್ದಾರೆ. ನಾನು ಮೊದಲು ತಾಯಿ ಗರ್ಭದಲ್ಲಿ ಹುಟ್ಟಿದ್ದೇನೆಂದು ಎಲ್ಲರಿಗೂ ತಿಳಿಯುವುದಕ್ಕೆ ನಾನು ನನ್ನ ಹೆಸರಿನ ಮುಂದೆ 'ಭಗವಾನ್' ಎಂಬ ಹೆಸರನ್ನು ಇಟ್ಟುಕೊಂಡಿದ್ದೇನೆ. ನಾನು ಹುಟ್ಟಿದ ನಂತರ ನನಗೆ ಹೆಸರು ಇಡಲಾಯಿತು. ಆದ್ದರಿಂದ ಭಗವಾನ್ ಹೆಸರಿನ ನಂತರ 'ಗೋಪಿಕಾ ಶ್ರೀವರ್ಧನ್' ಎಂಬ ಹೆಸರನ್ನು ಬರೆಯುವುದು ನಡೆಯುತ್ತಿದೆ.

ಕೃಷ್ಣನು ಹುಟ್ಟಿದ ಬಹಳ ದಿನಗಳಿಗೆ, ಆತನಿಗೆ ಕೃಷ್ಣ ಎಂಬ ಹೆಸರು ಇಟ್ಟ ನಂತರ ಎಷ್ಟೋ ಕಾಲಕ್ಕೆ ಕೃಷ್ಣನು ಮೇಲಿನಿಂದ ಇಳಿದು ಬರಲಿಲ್ಲವೆಂದು, ಆತನು ತಾಯಿ ಗರ್ಭದಿಂದ ಹುಟ್ಟಿದ್ದಾನೆಂದು ಎಲ್ಲರಿಗೂ ತಿಳಿದಿದೆ. ಆದ್ದರಿಂದ ಆತನ ಹೆಸರನ್ನು ಮೊದಲು ಹೇಳಿ ನಂತರ ಭಗವಾನ್ ಎಂದು ಹೇಳುತ್ತಾ 'ಕೃಷ್ಣ ಭಗವಾನ್' ಎಂದು ಅನ್ನುವುದು ನಡೆಯುತ್ತಿದೆ. ನಾನು ಮೊದಲು ಹುಟ್ಟಿರುವೆನೆಂದು ನಂತರ ಹೆಸರು ಇಡಲಾಗಿದೆ ಎಂದು ತಿಳಿಸುವುದಕ್ಕೆ ನನ್ನ ಹೆಸರಿನ ಮೊದಲು ಭಗವಾನ್ ಎಂದು ಹೆಸರಿದ್ದರೇ, ಕೃಷ್ಣನಿಗೆ ಹೆಸರಿಟ್ಟ ನಂತರ ಗರ್ಭದಿಂದ ಹುಟ್ಟಿರುವನೆಂದು ತಿಳಿಯುವುದರಿಂದ ಆತನ ಹೆಸರಿನ ನಂತರ ಭಗವಾನ್ ಎಂದು ಹೆಸರಿಟ್ಟು 'ಕೃಷ್ಣ ಭಗವಾನ್' ಎಂದು ಹೇಳುತ್ತಿದ್ದೇವೆ. ನನ್ನ ಹೆಸರು ಹಾಗಲ್ಲದೇ 'ಭಗವಾನ್ ಗೋಪಿಕಾ ಶ್ರೀವರ್ಧನ್ ಸ್ವಾಮೀಜಿ' ಎಂದು ಹೇಳಲ್ಪಡುತ್ತಿದೆ. ಕೃಷ್ಣನ ಹೆಸರಿನ ಹಿಂದೆ ಭಗವಾನ್ ಇದ್ದರೇ ನಮ್ಮ ಹೆಸರಿನ ಮೊದಲು ಭಗವಾನ್ ಎಂದು ಇರುವುದನ್ನು ನೀವು ಗಮನಿಸದೇ ಕೇಳಿದ್ದೀರ. ಭಗವಾನ್ ಮೊದಲಿದ್ದರೇ ಒಂದು ಅರ್ಥ, ಹಿಂದೆ ಇದ್ದರೇ

ಮತ್ತೊಂದು ಅರ್ಥವಿರುತ್ತದೆ ಎಂದು ತಿಳಿಯದೆ ನೀನು ನನ್ನನ್ನು ಕೇಳಿದ್ದೀಯೆಂದು ತಿಳಿಯುತ್ತಿದೆ. ಈಗ ನಾನು ಹೇಳಿದ ನಂತರ ವಿವರವಾಗಿ ಅರ್ಥವಾಗಿದೆಯಾ!

**ನಾನು:–** ಭಗವಾನ್ ಎಂದರೇ ಭಗದಿಂದ ಹುಟ್ಟಿದವನೆಂದೂ ಅಥವಾ ತಾಯಿಗರ್ಭದಿಂದ ಹುಟ್ಟಿರುವವನೆಂದು ನೀವೇ ಹೇಳುತ್ತಿದ್ದೀರ ಅಲ್ಲವೇ! ಗೋಪಿಕಾ ಶ್ರೀವರ್ಧನ್ ಸ್ವಾಮೀಜಿ ಎಂದು ಹೆಸರು ಇಡಲಾಗಿರುವ ನೀವು ತಾಯಿ ಗರ್ಭದಿಂದ ಹುಟ್ಟಿದ್ದೀರಾ? ಎಂದು ನಾನು ನಿಮ್ಮನ್ನು ಪ್ರಶ್ನಿಸುತ್ತಿದ್ದೇನೆ.

**ಭಗವಾನ್:–** ತಾಯಿ ಗರ್ಭದಿಂದ ಹುಟ್ಟಿರುವೆನೆಂದೇ ತಿಳಿಯುವಹಾಗೆ ಭಗವಾನ್ ಎಂದು ಹೆಸರಿಟ್ಟುಕೊಂಡಿದ್ದೇನೆ. ಎಲ್ಲರೂ ತಾಯಿ ಗರ್ಭದಿಂದಲೇ ಹುಟ್ಟುತ್ತಿದ್ದಾರೆಂದು ಪ್ರತಿಯೊಬ್ಬರಿಗೂ ತಿಳಿದಿದೆ. ಈಗ ನನ್ನನ್ನು ಪ್ರತ್ಯೇಕವಾಗಿ ನೀನು ತಾಯಿ ಗರ್ಭದಿಂದ ಹುಟ್ಟಿದ್ದೀಯಾ! ಎಂದು ಕೇಳುವುದರಲ್ಲಿ ಅರ್ಥವೇನು? ಹಾಗೆ ಕೇಳಬೇಕಾದ ಕೆಲಸವೇನಿದೆ?

**ನಾನು:–** ಭೂಮಿಮೇಲೆ ಹುಟ್ಟಿರುವ ಪ್ರತಿಯೊಬ್ಬನು ತಾನು ತಾಯಿಗರ್ಭದಿಂದ ಹುಟ್ಟಿದ್ದೇನೆಂದು ಅಂದುಕೊಳ್ಳುವುದು ಸಹಜ. ಆದರೇ ನಾನಾಗಲೀ ಮತ್ತೆ ಇನ್ನ್ಯಾರಾಗಲಿ ಜನ್ಮಿಸಿದ ಪ್ರತಿಯೊಬ್ಬನು ತಾಯಿಗರ್ಭದಿಂದ ಸಜೀವವಾಗಿ ಹುಟ್ಟಲಿಲ್ಲ. ಶಿಶು ಶರೀರವು ತಾಯಿಗರ್ಭದಿಂದ ಹುಟ್ಟಿದ ನಂತರ 'ಜೀವಿಯು' ಎನ್ನಲ್ಪಡುವ ಪ್ರತಿಯೊಬ್ಬನು ಶಿಶು ಶರೀರದಲ್ಲಿ ಸೇರಿ ಜನ್ಮ ತೆಗೆದುಕೊಳ್ಳುವುದು ನಡೆಯುತ್ತಿದೆ. ಇದು ಜಗತ್ತಿಗೆ ತಿಳಿಯದ ಸತ್ಯ. ಆ ಸತ್ಯವು ನಿಮಗು ಕೂಡಾ ತಿಳಿಯದೆಂದೇ ನಿಮ್ಮನ್ನು ಪ್ರಶ್ನಿಸುವುದು ನಡೆದಿದೆ. ಇರುವ ವಿಷಯವು ಹೇಳಿದ್ದೇನೆ ಅಲ್ಲವೇ! ಈಗ ಹೇಳಿರಿ ನೀನು ನಿಮ್ಮ ಶರೀರದೊಂದಿಗೆ ಸಹ ತಾಯಿಗರ್ಭದಿಂದ ಹುಟ್ಟಿದ್ದೀಯಾ? ಅಥವಾ ಹುಟ್ಟಿರುವ ಶರೀರದಲ್ಲಿ ಸ್ವಲ್ಪಹೊತ್ತಿಗೆ ಪ್ರವೇಶಿಸಿ ಜನ್ಮಿಸಿದ್ದೀಯಾ ಹೇಳಬಲ್ಲೆಯಾ? ನಿಮ್ಮ ವಿಷಯವು ನಿಮಗೆ ಜ್ಞಾಪಕ ಇಲ್ಲದ ಸಮಯದಲ್ಲಿ ನಡೆದುಹೋಗಿದೆ ಆದಕಾರಣ ನಿಮಗೆ ನಿಮ್ಮ ವಿಷಯದ ಮೇಲೆ ಅವಗಾಹನೆ ಇಲ್ಲದೆ ಹೋಗಿರಬಹುದು. ಈಗ ಪ್ರಸ್ತುತ ಕಾಲದಲ್ಲಿ ಎಷ್ಟೋಜನ

ಪ್ರತಿಕ್ಷಣ ಹುಟ್ಟುತ್ತಿದ್ದಾರೆ ಅಲ್ಲವೇ! ಹುಟ್ಟುತ್ತಿರುವವರ ಬಳಿಗೆ ಹೋಗಿ ಪ್ರತ್ಯಕ್ಷವಾಗಿ ನೋಡುವುದಾದರೇ ನೇರವಾಗಿ ತಾಯಿಗರ್ಭದಿಂದ ಯಾರೂ ಹುಟ್ಟಲಾರರೆಂದು ತಿಳಿಯಬಲ್ಲರು. ತಾಯಿಗರ್ಭದಿಂದ ನೇರವಾಗಿ ಪ್ರಾಣದಿಂದ ಜೀವವಿದ್ದು ಹುಟ್ಟುವವನು ಯಾರಾದರೂ ಇದ್ದಾರೇನೋ ಹೇಳಲ್ಲಿರಾ?ಹುಟ್ಟುವವರನ್ನು ನೂರು ವರ್ಷಗಳು ಗಮನಿಸಿ ನೋಡಿದರೂ, ತಾಯಿಗರ್ಭದಿಂದ ಹುಟ್ಟಿರುವವನನ್ನು ಒಬ್ಬನನ್ನು ಸಹ ತೋರಿಸಲಾರೆವು.

ಒಬ್ಬ ದೇವರು ಹೊರತು ತಾಯಿಗರ್ಭದಿಂದ ಸಜೀವವಾಗಿ ಹುಟ್ಟುವವನು ಯಾರೂ ಇಲ್ಲ. ಆ ವಿಷಯವು ನಿನಗೆ ತಿಳಿಯದೆ ನಿನ್ನ ಹೆಸರಿನ ಮೊದಲು (ಮುಂದೆ) 'ಭಗವಾನ್' ಎಂದು ಹೇಳಿಕೊಳ್ಳುತ್ತಿದ್ದೀಯಾ. ಪ್ರಪಂಚದಲ್ಲಿ ಸರ್ವವ್ಯಾಪಿ ಆಗಿರುವ ದೇವರು ಒಬ್ಬನು ತಾಯಿಗರ್ಭದಿಂದ ಭಗವಂತನಾಗಿ ಹುಟ್ಟಬಲ್ಲನು. ಉಳಿದವರೆಲ್ಲರೂ ತಾಯಿಗರ್ಭದ ಹೊರೆಗೆ ಶಿಶು ಶರೀರದಲ್ಲಿ ಸೇರುವುದರಿಂದ ಯಾರೂ ಭಗವಂತನೆಂಬ ಹೆಸರಿಗೆ ಅರ್ಹರಲ್ಲ. ಕೃಷ್ಣನು ನಿಜವಾದ ಭಗವಂತನಾದರೂ ಆತನು ಇರುವಾಗ ಆತನು ಭಗವಂತನೆಂದು ಯಾರಿಗೂ ತಿಳಿದಿಲ್ಲ. ಆತನು ಬಂದುಹೋದ ನಂತರ ನಿಜವಾದ ಭಗವಂತನು, ನಿಜವಾದ ದೇವರು ಎಂದು ತಿಳಿಯಿತು. ಆತನು ಹೋದ ನಂತರ ಎಷ್ಟೋ ಹಿಂದಿನ ಕಾಲದಲ್ಲಿ ಆತನು ಭಗವಂತನೆಂದು ತಿಳಿಯುವುದರಿಂದ ಕೃಷ್ಣನೆಂಬ ಹೆಸರಿನ ಹಿಂದೆ ಭಗವಾನ್ ಎಂದು ಹೇಳುವುದು ನಡೆದಿದೆ. ಆತನು ಯಾರಾಗಿರುವುದು ಮೊದಲೇ ತಿಳಿದಿದ್ದರೇ, ಆತನು ಬದುಕಿದ್ದಾಗಲೇ ತಿಳಿದಿದ್ದರೇ ಆತನ ಹೆಸರಿನ ಮೊದಲು ಭಗವಾನ್ ಎಂದು ಹೇಳುತ್ತಿದ್ದೆವು. ಮೊದಲು ತಿಳಿದಿಲ್ಲ, ಆತನು ಬಂದು ಹೋದ ನಂತರ ತಿಳಿದಿರುವುದರಿಂದ ಆತನ ಹೆಸರಿನ ಮುಂದೆ ಭಗವಾನ್ ಸೇರಿಸಿ **"ಶ್ರೀಕೃಷ್ಣ ಭಗವಾನ್"** ಎಂದು ಹೇಳಿದ್ದೇವೆ. ಹೆಸರಿನ ಮುಂದೆ ಭಗವಾನ್ ಎಂದು ಯಾಕೆ ಹೇಳಿದ್ದೇವೋ ನಿಮಗೆ ಈಗ ತಿಳಿಯಿತಾ?

ನೀವು ರೂಪಾಯಿಯಲ್ಲಿ ಒಂದು ಪೈಸಾ ಭಾಗವೂ ಸಹ ಭಗವಂತನಲ್ಲದಿದ್ದರೂ ಭಗವಂತನೆಂದು ಅಕ್ರಮವಾಗಿ ಹೆಸರಿಟ್ಟುಕೊಳ್ಳುವುದೇ ಅಲ್ಲದೇ ಮೊದಲು ಇಟ್ಟುಕೊಂಡಿರುವುದಕ್ಕೆ ತಪ್ಪು ಅರ್ಥವನ್ನು ಹೇಳುತ್ತಿದ್ದೀರ. ಮೊದಲಿಗೇ ನೀವು ಭಗವಂತರಾಗದಿದ್ದರೂ ಭಗವಂತನೆಂದು ದೇವರ ಬಿರುದನ್ನು ತಗುಲಿಸಿಕೊಳ್ಳುವುದು ದೊಡ್ಡ ತಪ್ಪಾಗುವುದು. ನಿನ್ನನ್ನು ನೀನೇ ದೇವರಷ್ಟವನನ್ನಾಗಿ ಹೇಳಿಕೊಂಡಂತಾಗುತ್ತದೆ. ಅದು ನಿಮಗೆ ಒಳ್ಳೆಯದೇನೋ ನೀವೇ ಹೇಳಿರಿ. ತಿಳಿಯದೆ ಮಾಡಿರುವ ತಪ್ಪನ್ನು ಇಲ್ಲದಂತಿರುವುದಕ್ಕೆ ಇಂದಿಗಾದರೂ ನೀವು ಕೂಡಲೇ 'ಭಗವಾನ್' ಎನ್ನುವ ಮೊದಲ ಪದವನ್ನು ತೆಗೆದುಹಾಕಿರಿ. 'ಭಗವಾನ್' ಎಂಬ ಪದಕ್ಕೆ ನಿಜವಾದ ಅರ್ಥವನ್ನು ತಿಳಿದು ಅದು ದೇವರ ಜನ್ಮಕ್ಕೇ ಅರ್ಹವಾದುದೆಂದು ತಿಳಿದು ದೇವರ ಜನ್ಮವನ್ನು ಭಗವಂತನೆಂದು ಹೇಳುವುದು ಒಳ್ಳೆಯದು. ದೇವರು ಸರ್ವವ್ಯಾಪಿ ಆತನು ಎಲ್ಲೆಡೆ ಅಣುಅಣುವಿನಲ್ಲೂ ತುಂಬಿರುವವನು ತಾಯಿಗರ್ಭದಲ್ಲಿ ಕೂಡಾ ಇರುವ ಪರಮಾತ್ಮ ಗರ್ಭದಲ್ಲಿನ ಶಿಶು ಶರೀರದಲ್ಲಿ ಕೂಡಾ ವ್ಯಾಪಿಸಿ ಇರುವುದರಿಂದ ಆತನು ಮತ್ತೊಂದುಕಡೆಯಿಂದ ಬಂದು ಹುಟ್ಟುವವನಲ್ಲ. ದೇವರು ಸರ್ವವ್ಯಾಪಿ ಆಗಿರುವುದರಿಂದ ತಾಯಿಗರ್ಭದಿಂದ ಸಜೀವವಾಗಿ ಹುಟ್ಟುತ್ತಿದ್ದಾನೆ. ಸಾಧಾರಣ ಜೀವಾತ್ಮ ಮತ್ತೊಂದುಕಡೆ ಮರಣಿಸಿ ಅಲ್ಲಿಂದ ಬಂದು ಪ್ರಸವಿಸಲ್ಪಟ್ಟ ಶರೀರದಲ್ಲಿ ಹುಟ್ಟುತ್ತಿದೆ.

ಭಗವದ್ಗೀತೆಯಲ್ಲಿ ನಾಲ್ಕನೆಯ ಅಧ್ಯಾಯವಾದ ಜ್ಞಾನಯೋಗದಲ್ಲಿ ಏಳು, ಎಂಟು ಶ್ಲೋಕಗಳಲ್ಲಿ ದೇವರು ಧರ್ಮಸಂಸ್ಥಾನೆಗಾಗಿ ಹುಟ್ಟುವೆನೆಂದು ತಿಳಿಸಲಾಗಿದೆ. ಅಷ್ಟೇ ಅಲ್ಲದೇ ಅದೇ ಅಧ್ಯಾಯದಲ್ಲಿ ಈ ಎರಡು ಶ್ಲೋಕಗಳಿಗಿಂತಲೂ ಮೊದಲು ಆರನೆಯ ಶ್ಲೋಕದಲ್ಲಿ ತನ್ನ ಜನ್ಮವನ್ನು ಕುರಿತು ದೇವರು ಭಗವಂತನ ರೂಪದಲ್ಲಿ ಹೇಳಿರುವ ಶ್ಲೋಕವನ್ನು ನೋಡಿದರೇ ದೇವರು ಸಾವು, ಹುಟ್ಟುಗಳು ಇಲ್ಲವನಾದರೂ ಹೇಗೆ ಹುಟ್ಟುತ್ತಿದ್ದಾನೋ ತಿಳಿಯಬಲ್ಲದು. ಒಂದು ಸಲ ಆ ಶ್ಲೋಕವನ್ನು ನೋಡಿರಿ.

**ಜ್ಞಾನಯೋಗ 6ನೇ ಶ್ಲೋಕ...**

**ಶ್ಲೋ॥ *ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾ ಮೀಶ್ವರೋಽಪಿ ಸನ್।***
***ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾ ಮ್ಯಾತ್ಮ ಮಾಯಯಾ॥***

**ಭಾವಾರ್ಥ: "ನನಗೆ ಹುಟ್ಟುವಿಕೆಯಾಗಲೀ, ಮರಣವಾಗಲೀ ಇಲ್ಲ. ನಾನು ಸರ್ವಜೀವರಾಶಿಗಳಿಗೆ ಈಶ್ವರನಾದ (ದೇವರಾದ)ವನು. ಆದರೂ ನನ್ನ ಪ್ರಕೃತಿಯನ್ನು ನಾನು ಪ್ರತಿಷ್ಠಾಪಿಸಿ ಶರೀರವನ್ನು ತಯಾರಿ ಮಾಡಿಕೊಂಡು ಅದರಲ್ಲಿ ಗುಣಗಳ ಮಾಯೆಯೊಂದಿಗೆ ಮತ್ತು ಆತ್ಮದೊಂದಿಗೆ ಸಹ ಭೂಮಿಮೇಲೆ ಹುಟ್ಟುತ್ತಿದ್ದೇನೆ."**

**ಜ್ಞಾನಯೋಗ 7ನೇ ಶ್ಲೋಕ...**

**ಶ್ಲೋ॥ ಯದಾ ಯದಾಹೀ ಧರ್ಮಸ್ಯ ಗ್ಲಾನಿರ್ಭವತಿ ಭಾರತ! ।**
**ಅಭ್ಯುತ್ಥಾನ ಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್ ॥**

**ಭಾವಾರ್ಥ:– "ಯಾವಾಗ್ಯಾವಾಗ ಧರ್ಮಕ್ಕೆ ಮುಪ್ಪು ಉಂಟಾಗಿ ಭೂಮಿಮೇಲೆ ಅಧರ್ಮವು ಅಭಿವೃದ್ಧಿ ಹೊಂದುತ್ತದೋ ಆಗಾಗ ಭೂಮಿಮೇಲೆ ನನ್ನನ್ನು ನಾನು ತಯಾರಿ ಮಾಡಿಕೊಂಡು ಶರೀರದೊಂದಿಗೆ ಹುಟ್ಟುತ್ತಿದ್ದೇನೆ."**

ಈ ಎರಡು ಶ್ಲೋಕಗಳ ಭಾವವನ್ನು ತಿಳಿದ ನಂತರ ಯಾರಾದರಾಗಲಿ ದೇವರು ಹುಟ್ಟುವುದಿಲ್ಲವೆಂದು ಹೇಳುವುದಕ್ಕೆ ಅವಕಾಶವಿಲ್ಲ. ಈ ಶ್ಲೋಕಗಳು ಪ್ರಥಮ ದೈವಗ್ರಂಥದಲ್ಲಿದ್ದರೇ, ದ್ವಿತೀಯ ದೈವಗ್ರಂಥದಲ್ಲಿ ಇರುವ ವಾಕ್ಯವನ್ನು ಅನುಸರಿಸಿ ಕೂಡಾ ದೇವರು ಮನುಷ್ಯನಾಗಿ ಹುಟ್ಟುವನೆಂದು ತಿಳಿಯುತ್ತಿದೆ. ದ್ವಿತೀಯ ದೈವಗ್ರಂಥವಾದ ಬೈಬಲ್‌ನಲ್ಲಿ (ಇಂಜೀಲಿನಲ್ಲಿ) ಮುಂಬರುವ ಎಂದರೇ ಹುಟ್ಟಿಬರುವ ದೇವರನ್ನು **"ಆದರಣಕರ್ತಯೆಂದು"** ಹೇಳಿದಂತೆ ತಿಳಿಯಬೇಕು. ಯೋಹಾನ್ ಸುವಾರ್ತೆ 14ನೇ ಅಧ್ಯಾಯದಲ್ಲಿ 16, 17 ವಾಕ್ಯಗಳು **(ಯೋಹಾನ್ 14–16,17) "ನಾನು ತಂದೆಯನ್ನು ಬೇಡಿಕೊಳ್ಳುವೆನು, ನಿಮ್ಮ ಬಳಿ ಯಾವಾಗಲೂ ಇರುವುದಕ್ಕಾಗಿ ಆತನು ಬೇರೆಯೊಂದು ಆದರಣಕರ್ತನನ್ನು ಎಂದರೇ**

**ಸತ್ಯಸ್ವರೂಪಿಯಾದ ಆತ್ಮನನ್ನು ನಿಮಗೆ ಅನುಗ್ರಹಿಸುವನು. ಲೋಕವು ಆತನನ್ನು ನೋಡುವುದಿಲ್ಲ, ಆತನನ್ನು ಗ್ರಹಿಸುವುದಿಲ್ಲ ಆದಕಾರಣ ಆತನನ್ನು ಹೊಂದಲಾಗದು. ನೀವು ಮಾತ್ರ ಆತನನ್ನು ಗ್ರಹಿಸುವಿರಿ, ಆತನು ನಿಮ್ಮೊಂದಿಗೆ ಕೂಡಾ ನಿವಾಸಿಸುತ್ತಾನೆ, ನಿಮ್ಮಲ್ಲೇ ಇರುತ್ತಾನೆ." (25,26) "ನಾನು ನಿಮ್ಮಬಳಿ ಇರುವಾಗಲೇ ಈ ಮಾತುಗಳನ್ನು ನಿಮ್ಮೊಂದಿಗೆ ಹೇಳಿದ್ದೇನೆ. ಆದರಣಕರ್ತ ಎಂದರೇ ತಂದೆ ನನ್ನ ನಾಮದಲ್ಲಿ ಕಳುಹಿಸುವ ಪರಿಶುದ್ಧಾತ್ಮ ಸರ್ವವನ್ನು ನಿಮಗೆ ಬೋಧಿಸಿ ನಾನು ನಿಮ್ಮೊಂದಿಗೆ ಹೇಳಿರುವ ಸಂಗತಿಗಳೆಲ್ಲವನ್ನು ನಿಮಗೆ ಜ್ಞಾಪಕ ಮಾಡುವನು." (ಯೋಹಾನ್ 15–26) "ತಂದೆ ಬಳಿಯಿಂದ ನಿಮ್ಮ ಬಳಿಗೆ ಕಳುಹಿಸಲ್ಪಡುವ ಆದರಣಕರ್ತ ಎಂದರೇ ತಂದೆಬಳಿಯಿಂದ ಹೊರಡುವ ಸತ್ಯಸ್ವರೂಪಿಯಾದ ಆತ್ಮ ಬಂದಾಗ ಆತನು ನನ್ನನ್ನು ಕುರಿತು ಸಾಕ್ಷಿಕೊಡುವನು." (ಯೋಹಾನ್ 16–12, 13) "ನಾನು ನಿಮ್ಮೊಂದಿಗೆ ಹೇಳಬೇಕಾಗಿರುವವು ಇನ್ನೂ ಅನೇಕ ಸಂಗತಿಗಳು ಇವೆ ಆದರೇ, ಈಗ ಅವುಗಳನ್ನು ನೀವು ಸಹಿಸುವುದಿಲ್ಲ. ಆದರೇ ಆತನು ಎಂದರೇ ಸತ್ಯಸ್ವರೂಪಿಯಾದ ಆತ್ಮ ಬಂದಾಗ ನಿಮ್ಮನ್ನು ಸರ್ವಸತ್ಯದೊಳಗೆ ನಡೆಸುವನು." (25) "ಈ ಸಂಗತಿಗಳು ಗೂಢಾರ್ಥವಾಗಿ ನಿಮ್ಮೊಂದಿಗೆ ಹೇಳಿದ್ದೇನೆ. ಆದರೇ ನಾನಿನ್ನು ಎಂದೂಸಹ ಗೂಢಾರ್ಥವಾಗಿ ನಿಮ್ಮೊಂದಿಗೆ ಮಾತನಾಡದೆ ತಂದೆಯನ್ನು ಕುರಿತು ನಿಮಗೆ ಸ್ಪಷ್ಟವಾಗಿ ತಿಳಿಸುವ ಸಮಯ ಬರುತ್ತಿದೆ."**

ಈ ವಿಧವಾಗಿ ಎಂಟು ವಾಕ್ಯಗಳಲ್ಲಿ ಮುಂಬರುವ ಭಗವಂತನನ್ನು ಕುರಿತು ದ್ವಿತೀಯ ದೈವಗ್ರಂಥದಲ್ಲಿ ಹೇಳಿರುವುದಾಗಿದೆ. ಅಷ್ಟೇಅಲ್ಲದೆ ತೃತೀಯ ದೈವಗ್ರಂಥವಾದ ಅಂತಿಮ ದೈವಗ್ರಂಥವೆಂದು ಹೆಸರುಪಡೆದ "ಖುರಾನ್" ಗ್ರಂಥದಲ್ಲಿ ದೇವರ ಬರುವಿಕೆಯನ್ನು ಕುರಿತು ಹೇಳಿರುವ ವಾಕ್ಯಗಳನ್ನು ಒಂದು ಸಲ ಗಮನಿಸೋಣ. ಸೂರಾ 89, ಆಯತ್ 21, 22ರಲ್ಲಿ ಹೀಗೆ ಬರೆಯಲಾಗಿದೆ. **(89–21 22) "ಭೂಮಿಯನ್ನು ಹೇಗೆಂದರೆಹಾಗೆ ಬಡಿದು ತುಂಡುಗಳಾಗಿ ಮಾಡುವುದು ನಡೆದಾಗ ನಿಮ್ಮ ಪ್ರಭುವು ಅವತರಿಸುತ್ತಾನೆ. (22) "ದೇವದೂತರು ಸಾಲು ಸಾಲಾಗಿ ನಿಂತಿರುವಾಗ ದೇವರು ಅವತರಿಸುತ್ತಾನೆ".**

ಅದೇ ಅಂತಿಮ ದೈವಗ್ರಂಥವಾದ ಖುರಾನ್ ಗ್ರಂಥದಲ್ಲಿ ಸೂರಾ 15, ಆಯತ್ 28, 29, 30 ರಲ್ಲಿ ಹೀಗಿದೆ ನೋಡಿರಿ. (15–28, 29, 30) ನಿನ್ನ ಪ್ರಭುವು ದೇವದೂತರೊಂದಿಗೆ ಹೀಗೆ ಹೇಳಿದ್ದಾನೆ. **(28) "ನಿಶ್ಚಯವಾಗಿ ನಾನು ಪ್ರತಿ ಧ್ವನಿಸುವ ಮಣ್ಣು ರೂಪಾಂತರಗೊಂಡ ಜಿಗುಟಾದ ಬುರದೆಯಿಂದ ಮಾನವನನ್ನು ಸೃಷ್ಟಿಸುತ್ತಿದ್ದೇನೆ. (29) "ಇನ್ನು ನಾನು ಅತನಿಗೆ ಪೂರ್ತಿ ಆಕಾರಕೊಟ್ಟು ಆತನಲ್ಲಿ ನನ್ನ ಪರವಾಗಿ ನನ್ನ ಆತ್ಮವನ್ನು ಊದಿ ನಂತರ ನೀವೆಲ್ಲಾ ಆತನಮುಂದೆ ಸಾಷ್ಟಾಂಗ ನಮಸ್ಕಾರ ಮಾಡಬೇಕು. (30) "ಆಗ ದೇವದೂತರೆಲ್ಲರೂ ಸೇರಿ ಸಾಷ್ಟಾಂಗ ನಮಸ್ಕಾರ ಮಾಡಿದ್ದಾರೆ. (31) "ಒಬ್ಬ ಇಬ್ಲೀಸು (ಮಾಯೆ) ಹೊರತು ಆತನು ಸಾಷ್ಟಾಂಗ ಬೀಳುವವರಲ್ಲಿ ಸೇರುವುದಿಲ್ಲ ಎಂದು ಹಟಮಾಡಿದನು."** (ಈ ವಾಕ್ಯಗಳು "ದಿವ್ಯ ಖುರಾನ್ ಸಂದೇಶವು ತೆಲುಗು ಭಾಷೆಯಲ್ಲಿ" ಎಂಬ ಗ್ರಂಥದಲ್ಲಿ ಇವೆ. ಇವೇ ವಾಕ್ಯಗಳು ತೆಲುಗು ಅನುವಾದವಾಗಿರುವ ಇನ್ನು ಎರಡು ಗ್ರಂಥಗಳಲ್ಲಿ ನೋಡೋಣ. ಮೊದಲು "ಅಂತಿಮ ದೈವಗ್ರಂಥ ಖುರಾನ್" ಎಂಬ ಗ್ರಂಥದಲ್ಲಿಯೂ, ನಂತರ "ಖುರಾನ್ ಭಾವಾಮೃತ" ಎಂಬ ಗ್ರಂಥದಲ್ಲಿನ ವಾಕ್ಯಗಳನ್ನು ಬರೆಯುತ್ತಿದ್ದೇವೆ ನೋಡಿ.) **(15–28) "ಕೊಳೆತು ಚೆನ್ನಾಗಿ ಒಣಗಿಹೋಗಿರುವ (ಕಪ್ಪನೆಯ) ಮಣ್ಣಿನಿಂದ ನಾನು ಒಬ್ಬ ಮಾನವನನ್ನು ಸೃಷ್ಟಿಸುತ್ತಿದ್ದೇನೆ."** ಎಂದು ನಿನ್ನ ಪ್ರಭುವು ದೇವದೂತರೊಂದಿಗೆ ಹೇಳಿದ್ದಾನೆ. **(29) "ನಾನು ಆತನನ್ನು ಪೂರ್ತಿಯಾಗಿ ತಯಾರಿ ಮಾಡಿ, ಆತನಲ್ಲಿ ನನ್ನ ಆತ್ಮನನ್ನು ಊದಿದಾಗ ನೀವೆಲ್ಲಾ ಆತನ ಮುಂದೆ ಸಾಷ್ಟಾಂಗ ಬೀಳಿರಿ." (30) "ದೂತರೆಲ್ಲರೂ ಸಾಷ್ಟಾಂಗ ಬಿದ್ದಿದ್ದಾರೆ. (31) "ಒಬ್ಬ ಇಬ್ಲೀಸು ಹೊರತು! ಸಾಷ್ಟಾಂಗ ಬೀಳುವವರೊಂದಿಗೆ ಸೇರುವುದಕ್ಕೆ ಅವನು ನಿರಾಕರಿಸಿದ್ದಾನೆ".**

(ಖುರಾನ್ ಭಾವಾಮೃತ) **(15–28) "ಆ ಸಂದರ್ಭದಲ್ಲಿ ನಿನ್ನ ಪ್ರಭುದೈವದೂತರೊಂದಿಗೆ ಹೇಳಿದ ಮಾತುಗಳು ಗುರುತುಮಾಡಿಕೋ, ನಾನು ಕೊಳೆತು ಒಣಗಿಹೋದ ಮಣ್ಣಿನಿಂದ ಒಬ್ಬ ಮಾನವನನ್ನು ಸೃಜಿಸುತ್ತಿದ್ದೇನೆ (ಸೃಷ್ಟಿಸುತ್ತಿದ್ದೇನೆ). ಮಾನವನನ್ನು ಸೃಷ್ಟಿಸುವುದು ಪೂರ್ತಿಯಾದ ನಂತರ ಆತನ**

**(ದೇಹದ)ಲ್ಲಿ ನನ್ನ ಆತ್ಮ(ಒಂದ)ನನ್ನು ಊದುತ್ತೇನೆ. ಆಗ ನೀವೆಲ್ಲಾ ಆತನಿಗೆ ಗೌರವಸೂಚನೆಯಾಗಿ ಅಭಿವಾದ (ಸಾಷ್ಟಾಂಗ ನಮಸ್ಕಾರ) ಮಾಡಬೇಕು"** ಎಂದಿದ್ದಾನೆ ನಿನ್ನ ಪ್ರಭು. **(30,31) "ಅದರಪ್ರಕಾರ ದೇವದೂತರೆಲ್ಲರೂ (ಮಾನವನಿಗೆ) ಅಭಿವಾದ ಮಾಡಿದ್ದಾರೆ, ಇಬ್ಲೀಸು ಹೊರತು. ಇಬ್ಲೀಸು ಅವರೆಲ್ಲರೊಂದಿಗೆ ಸಹ ಅಭಿವಾದ (ಸಾಷ್ಟಾಂಗ ನಮಸ್ಕಾರ) ಮಾಡುವುದಕ್ಕೆ ನಿರಾಕರಿಸಿದ್ದಾನೆ."**

ಈ ವಿಧವಾಗಿ ಮೂರು ದೈವಗ್ರಂಥಗಳಲ್ಲಿಯೂ ದೇವರು ಭಗವಂತನಾಗಿ ಹುಟ್ಟುವನೆಂದು ಇದೆ. ಆದರೂ ಕ್ರೈಸ್ತ, ಮುಸ್ಲಿಮ್ ಸಮಾಜದವರು ದೇವರು ಹುಟ್ಟುವುದಿಲ್ಲವೆಂದು ಹೇಳುತ್ತಿದ್ದಾರೆ. ಅವರ ಗ್ರಂಥಗಳಲ್ಲಿ ಬರೆದಿರುವುದಕ್ಕಿಂತಲೂ ಅವರ ಮತಹಿರಿಯರು ಹೇಳಿರುವುದೇ ದೊಡ್ಡದೆಂದು ಅವರಂದು ಕೊಳ್ಳುವುದರಿಂದ ಗ್ರಂಥಗಳಲ್ಲಿ ಕೂಡಾ ಆ ವಿಷಯವು ಇಲ್ಲವೆಂದು ಅಂದುಕೊಳ್ಳುತ್ತಿದ್ದಾರೆ. ಗ್ರಂಥಗಳಲ್ಲಿ ದೇವರು ಹುಟ್ಟುವುದಿಲ್ಲವೆಂದು ಬರೆದಹಾಗೆ ಅವರ ಹಿರಿಯರು ಹೇಳುತ್ತಿರುವಾಗ ಅವರ ಮಾತನ್ನೇ ಸತ್ಯವೆಂದು ಅಂದುಕೊಂಡಿದ್ದಾರೆ. ಗ್ರಂಥಗಳಲ್ಲಿರುವ ಸತ್ಯವನ್ನು ಗ್ರಹಿಸಲಾರದೆ ಹೋಗಿದ್ದಾರೆ. ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿ ಬಹಳ ಶ್ಲೋಕಗಳಲ್ಲಿ ದೇವರು ಮನುಷ್ಯನಾಗಿ ಹುಟ್ಟಿ ತನ್ನ ಧರ್ಮಗಳನ್ನು ಬೋಧಿಸಿ ಹೋಗುವನೆಂದು ಹೇಳಿದ್ದಾರೆ. ಅದೇ ವಿಷಯವೇ ದ್ವಿತೀಯ ದೈವಗ್ರಂಥವಾದ ಬೈಬಲ್ ಗ್ರಂಥದಲ್ಲಿ ಸ್ವಲ್ಪ ಭಾಷೆ ವ್ಯತ್ಯಾಸದಿಂದ ಇದೆ. ಭಗವದ್ಗೀತೆಯಲ್ಲಿ ನೇರವಾಗಿ ದೇವರೇ ತನ್ನ ಜನ್ಮವನ್ನು ಕುರಿತು ಹೇಳಿದಂತಿರುವಾಗ, ಬೈಬಲ್‌ನಲ್ಲಿ ದೇವರು ಹೇಳಿದಂತೆ ಅಲ್ಲದೇ ಪ್ರಸ್ತುತ ಜನ್ಮದಲ್ಲಿರುವ ಭಗವಂತನು ಮುಂಬರುವ ಭಗವಂತನ ಜನ್ಮವನ್ನು ಕುರಿತು ಹೇಳಿದಂತೆ ಇದೆ. ಭಗವದ್ಗೀತೆಯಲ್ಲಿ ದೇವರೇ ಹೇಳಿದಂತೆ, ಬೈಬಲ್‌ನಲ್ಲಿ ಭಗವಂತನು ಹೇಳಿದಂತೆ ಇದ್ದರೂ ದೇವರು ಭಗವಂತನಾಗಿ ಬರುವನೆಂಬ ವಿಷಯವೇ ಸ್ಪಷ್ಟವಾಗಿರುವುದು. ಇನ್ನು ಅಂತಿಮ ದೈವಗ್ರಂಥವಾದ ಖುರಾನ್ ವಿಷಯದೊಳಗೆ ಬಂದರೇ 89ನೆ ಸೂರಾದಲ್ಲಿ 21, 22 ಆಯತ್‌ಗಳಲ್ಲಿ

**"ದೇವರು ತಾಯಿಗರ್ಭದಿಂದ ಅವತರಿಸುತ್ತಾನೆಂಬ"** ಸೂಚನೆ ಮಾಡುತ್ತ ತಾಯಿಗರ್ಭವನ್ನು ಭೂಮಿಯಾಗಿ ಹೇಳಿ, ಪ್ರಸವ ಸಮಯದಲ್ಲಿ ಗರ್ಭದಲ್ಲಿ ಉಂಟಾಗುವ ನೋವನ್ನು ಎಂದರೇ ಪ್ರಸವವೇದನೆಯನ್ನು **'ಭೂಮಿಯನ್ನು ಬಡಿದು ತುಂಡುಗಳಾಗಿ ಮಾಡಿದಾಗ'** ಎಂದು ಹೇಳಿ ಭಗವಂತನು ಹುಟ್ಟುವನೆಂದು ಹೇಳುವುದಕ್ಕೆ **"ದೇವರು ಅವತರಿಸುತ್ತಾನೆ"** ಎಂದು ಹೇಳುವುದು ನಡೆದಿದೆ. ಸೂರಾ 15, ಆಯತ್ 28, 29, 30 ರಲ್ಲಿ **"ದೇವರೇ ಸ್ವತಃವಾಗಿ ತಾನು ಒಬ್ಬ ಮಾನವನನ್ನು ತಯಾರಿ ಮಾಡುತ್ತಿದ್ದೇನೆಂದು ಹುಟ್ಟಿಬರುವ ಭಗವಂತನನ್ನು ಮಾನವನು"** ಎಂದು ಹೇಳಿದ್ದಾನೆ. ದೇವರೇ ಸ್ವತಃವಾಗಿ ಹೇಳಿದ ವಾಕ್ಯದಲ್ಲಿ ದೇವರು ಮನುಷ್ಯನಾಗಿ ಹುಟ್ಟುವನೆಂದು ಹೇಳುವ ವಿಷಯವಾಗಿ ನಾನು ಮಣ್ಣಿನಿಂದ ಒಬ್ಬ ಮನುಷ್ಯನನ್ನು ಮಾಡಿ, ಅದರಲ್ಲಿ ನನ್ನ ಆತ್ಮನನ್ನೇ ಊದಿ ಕಳುಹಿಸುವೆನೆಂದು ಹೇಳಿದ್ದಾನೆ. ಹಾಗೆ ಕಳುಹಿಸಲ್ಪಡುವವನು ದೈವಾಂಶವಾದ ಭಗವಂತನು ಆಗಿರುವುದರಿಂದ "ಆತನಿಗೆ ಎಲ್ಲರೂ ನಮಸ್ಕರಿಸಿರೆಂದು" ಹೇಳಿದ್ದಾನೆ. ಅಷ್ಟೇಅಲ್ಲದೇ "ದೇವದೂತರು ಕೂಡಾ ನಮಸ್ಕರಿಸುತ್ತಾರೆ" ಎಂದು ಹೇಳಿದ್ದಾನೆ. ಒಟ್ಟಿನಲ್ಲಿ ಭಗವಂತನ ಸಮಾಚಾರವು ಭಗವದ್ಗೀತೆಯಲ್ಲಿನಹಾಗೆ 15ನೆ ಸೂರಾದಲ್ಲಿ ಸ್ವತಃವಾಗಿ ದೇವರೇ ಹೇಳಿದಂತೆ ಇದೆ.

ಈ ವಿಷಯವನ್ನು ಮುಸ್ಲಿಮ್‌ಗಳ ಬಳಿ ಪ್ರಸ್ತಾವಿಸಿದಾಗ ದೇವರು ಎಂದಿಗೂ ಹುಟ್ಟುವುದಿಲ್ಲ ಎಂದು ಹೇಳುತ್ತಾ 15ನೆ ಸೂರಾದಲ್ಲಿನ ವಿಷಯವನ್ನು ವಿವರಿಸುತ್ತಾ ಒಬ್ಬ ಮಾನವನನ್ನು ಎಂದು ಹೇಳಿರುವುದು ಆದಾಮ್‌ನನ್ನು ಕುರಿತು ಎಂದು ಹೇಳುತ್ತಿದ್ದಾರೆ. ಆದಾಮ್‌ನನ್ನು ಸೃಷ್ಠಿ ಆದಿಯಲ್ಲಿನ ಮೊದಲು ದೇವರಿಂದ ಸೃಷ್ಠಿಸಲ್ಪಟ್ಟ ಮನುಷ್ಯನೆಂದು, ಮೊದಲು ಆದಾಮ್ ಮೂಲಕವೇ ನಂತರ ಮಾನವ ಸಂತಾನವೆಲ್ಲಾ ಉಂಟಾಗಿದೆಯೆಂದು, ಮನುಷ್ಯರೆಲ್ಲರೂ ಆದಾಮ್ ಸಂತತಿಯನ್ನು ಹೇಳುತ್ತಿರುತ್ತಾರೆ. ಇಲ್ಲಿ ಸೂರಾ 15ರಲ್ಲಿ 28, 29, 30 ವಾಕ್ಯಗಳಲ್ಲಿ ಹೇಳಿರುವ ವಿಷಯವು ಹದಿನಾಲ್ಕು ನೂರು ವರ್ಷಗಳ ಕೆಳಗಿನದೆಂಬ ವಿಷಯವನ್ನು ಮರೆತುಹೋಗಿದ್ದಾರೆ. ಈ ಮಧ್ಯ ಕಾಲದಲ್ಲಿ

ನಾನು ಒಬ್ಬ ಮನುಷ್ಯನನ್ನು ಮಾಡಿ ನನ್ನ ಆತ್ಮವನ್ನು ಆತನಲ್ಲಿ ತುಂಬಿ ಕಳುಹಿಸುವೆನೆಂದು ನಡೆಯುವ ಸಮಾಚಾರವನ್ನು ದೇವರು ಹೇಳಿದಂತೆ ಜಿಬ್ರಯೇಲ್ ಆತ್ಮ (ಗ್ರಹ) ಹೇಳಿರುವಾಗ, ಆ ವಿಷಯವನ್ನು ಪಕ್ಕಕಿಟ್ಟು ಯಾವಾಗಲೋ ಸೃಷ್ಠಿ ಆದಿಯಲ್ಲಿ ನಡೆದು ಹೋಗಿರುವ ವಿಷಯವನ್ನು ತೆಗೆದುಕೊಂಡು ಬಂದು ಇಂದಿನ ಸಮಾಚಾರವಾಗಿ ಹೇಳುತ್ತಿದ್ದಾರೆ. ಸ್ವಲ್ಪ ವಿವೇಕದಿಂದ ಆಲೋಚಿಸುವವರಿಗೆ ಅದು ಆದಾಮ್‌ನು ಕುರಿತು ಹೇಳಿರುವುದಲ್ಲ ವೆಂದೂ, ಆದಾಮ್‌ನದು ಕಳೆದು ಹೋಗಿರುವ ಕಾಲವೆಂದೂ, ಇಲ್ಲಿ ಹೇಳಿರುವುದು ನಡೆಯುವುದನ್ನು ಎಂದು ಸುಲಭವಾಗಿ ತಿಳಿದು ಹೋಗುವುದು. ದೇವರು ತಾನು ಹೇಳಿರುವುದು ತನ್ನ ಆತ್ಮವನ್ನೇ ಊದಿ ಕಳುಹಿಸಲ್ಪಡುವ ತನ್ನ ಅಂಶವಾದ ಭಗವಂತನನ್ನು ಕುರಿತು ಎಂದು ಸುಲಭವಾಗಿ ತಿಳಿದು ಹೋಗುತ್ತಿದೆ. ಈ ವಿಧವಾಗಿ ಪ್ರಥಮ, ಅಂತಿಮ ದೈವಗ್ರಂಥಗಳಲ್ಲಿ ದೇವರೇ ಸ್ವತಃವಾಗಿ ಹೇಳಿದಂತಿರುವಾಗ, ಮಧ್ಯಮ ದೈವಗ್ರಂಥವಾದ ಬೈಬಲ್‌ನಲ್ಲಿ ಭಗವಂತನೇ ಮುಂಬರುವ ಭಗವಂತನನ್ನು ಕುರಿತು ಹೇಳಿದಂತಿದೆ. ಇಷ್ಟೆಲ್ಲಾ ಮೂರು ದೈವಗ್ರಂಥಗಳಲ್ಲಿ ಹೇಳಿದ್ದರೂ ಬಹಳಜನ ದೇವರ ಜನ್ಮವನ್ನು ಕುರಿತು ಸ್ವಲ್ಪವಾದರೂ ಆಲೋಚಿಸುತ್ತಿಲ್ಲ. ದೇವರು ಭಗವಂತನಾಗಿ ಕಾಣಿಸುವ ಮನುಷ್ಯನಾಗಿ ಬಂದು ಯಾರಿಗೂ ತಿಳಿಯದ ದೇವರ ಜ್ಞಾನವನ್ನು ಹೇಳಿದರೂ ಗ್ರಹಿಸದವರು ಇದ್ದಾರೆ. ಆದ್ದರಿಂದ ಭಗವಂತನನ್ನು ಕುರಿತಾದ ಸಮಾಚಾರವು ಭೂಮಿಮೇಲೆ ಸರಿಯಾಗಿ ತಿಳಿಯದೆ ಹೋಗಿದೆ.

ದೇವರ ಜ್ಞಾನವು ದೇವರಿಗೆ ಹೊರತು ಯಾವ ಮನುಷ್ಯನಿಗೂ ತಿಳಿಯದಿರುವಾಗ ದೇವರ ಸಮಾಚಾರವಾದ ಜ್ಞಾನವನ್ನು ದೇವರೇ ಭೂಮಿಮೇಲೆ ತಿಳಿಸಬೇಕಾಗಿದೆ. ಆದರೇ ದೇವರು ಕೆಲಸಮಾಡುವವನಲ್ಲ, ಹಾಗೆಯೇ ಕಾಣಿಸುವವನಲ್ಲ. ಆದ್ದರಿಂದ ದೇವರು ನೇರವಾಗಿ ಮನುಷ್ಯರಿಗೆ ಜ್ಞಾನವನ್ನು ತಿಳಿಸಲಿಲ್ಲ. ಆದ್ದರಿಂದ ದೇವರು ತನಗು ಮನುಷ್ಯರಿಗೂ ಮಧ್ಯದಲ್ಲಿ ಭಗವಂತನ ಪಾತ್ರವನ್ನು ಪೋಷಿಸುತ್ತಿದ್ದಾನೆ. ಭಗವಂತನು ಅತ್ತ ದೇವರೂ ಅಲ್ಲ, ಇತ್ತ

ಮನುಷ್ಯನೂ ಅಲ್ಲ. ದೇವರು ಅಲ್ಲದ ಪಕ್ಷದಲ್ಲಿ ದೇವರ ಧರ್ಮಗಳು ಮನುಷ್ಯನಾಗಿರುವ ಭಗವಂತನಿಗೆ ಅನ್ವಯಿಸುವುದಿಲ್ಲ. ಆದ್ದರಿಂದ ಭಗವಂತನು ಇತರರಿಗೆ ಕಾಣಿಸಬಹುದು. ಇತರರೊಂದಿಗೆ ಮಾತನಾಡಿ ದೇವರ ಧರ್ಮಗಳನ್ನು ತಿಳಿಸುವ ಕಾರ್ಯವನ್ನು ಮಾಡಬಹುದು. ಭಗವಂತನಾಗಿರುವ ದೇವರಿಗೆ ರೂಪ, ನಾಮ, ಕ್ರಿಯೆಗಳು ಇವೆಯೆಂದು ಹೇಳಬಹುದು. ಅದೇ ದೇವರಿಗೆ ರೂಪ, ನಾಮ, ಕ್ರಿಯೆಗಳು ಇಲ್ಲ. ದೇವರಾಗಿ ಇದ್ದು ದೇವರು ತನ್ನ ಜ್ಞಾನವನ್ನು ಇತರರಿಗೆ ಹೇಳಲಾರನು. ಹಾಗೆ ಹೇಳಬೇಕೆಂದರೇ ದೇವರ ಧರ್ಮಗಳಿಗೇ ಲೋಪ ಏರ್ಪಡುವುದು. ಹಾಗೆ ದೇವರ ಧರ್ಮಗಳಿಗೆ ಲೋಪ ಏರ್ಪಡದೆ ದೇವರ ಜ್ಞಾನವನ್ನು ದೇವರೇ ಹೇಳಬೇಕೆಂದರೇ ದೇವರು ಭಗವಂತನ ವೇಷ ಧರಿಸಬೇಕಾಗಿ ಬರುತ್ತದೆ. ಮನುಷ್ಯನಹಾಗೆ ಇದ್ದರೂ ಮನುಷ್ಯನಲ್ಲದಂತಹ ಭಗವಂತನ ರೂಪದಲ್ಲಿ ದೇವರ ಧರ್ಮಗಳನ್ನು ಸುಲಭವಾಗಿ ಮನುಷ್ಯರಿಗೆ ತಿಳಿಸಬಹುದು. ಭಗವಂತನು ಮನುಷ್ಯನಾಗಿ ಕಾಣಿಸಿದರೂ ಮನುಷ್ಯನಹಾಗೆ ಕರ್ಮಗಳು ಇಲ್ಲದವನು ಮತ್ತು ಕರ್ಮಗಳು ಅಂಟದವನಾಗಿದ್ದಾನೆ. ಆದ್ದರಿಂದ ಇತ್ತ ದೇವರಲ್ಲವೆಂದು, ಅತ್ತ ಮನುಷ್ಯನಲ್ಲವೆಂದು ಭಗವಂತನನ್ನು ಹೇಳಬಹುದು. ಇತ್ತ ದೇವರಿಗೆ ಅತ್ತ ಮನುಷ್ಯನಿಗೆ ಭಿನ್ನವಾಗಿರುವವನು ಭಗವಂತನು.

ದೇವರು ಭಗವಂತನಾಗಿ ಜನ್ಮಿಸಿದರೆ ಮನುಷ್ಯನ ಹಾಗೆಯೇ ಇರುತ್ತಾನೆ, ಆದಕಾರಣ ಮನುಷ್ಯರು ಯಾರೂ ಆತನು ದೇವರ ಅವತಾರವಾದ ಭಗವಂತನೆಂದು ಗುರುತಿಸಲಾರರು. ಭಗವಂತನು ಮನುಷ್ಯನಾಗಿದ್ದರೂ ಆತನು ಮನುಷ್ಯನ ಆಕಾರದಲ್ಲಿರುವ ದೇವರೇಯೆಂದು, ದೇವರ ಜ್ಞಾನವೆಲ್ಲವೂ ಭಗವಂತನಾಗಿ ಇರುವವನಿಗೆ ತಿಳಿಯುವುದೆಂದು ಹೇಳಬಹುದು. ದೇವರು ತನ್ನ ಜ್ಞಾನವನ್ನು ಪ್ರಜೆಗಳಿಗೆ ವಿವರಿಸುವುದಕ್ಕೆ ಭಗವಂತನಾಗಿ ಎಷ್ಟು ಸಲ ಆದರೂ ಜನ್ಮಿಸಬಹುದು. ಧರ್ಮಗಳಿಗೆ ಮುಪ್ಪು ಉಂಟಾಗಿ ಧರ್ಮಗಳು ತಿಳಿಯದೇ ಹೋದಾಗ ದೇವರು ಮನುಷ್ಯನಾದ ಭಗವಂತನಾಗಿ ಬಂದು ಜ್ಞಾನವನ್ನು ಹೇಳಬಹುದು. ಆದ್ದರಿಂದ ದೇವರು ಭಗವಂತನಾಗಿ ಎಷ್ಟು ಸಲ

ಆದರೂ ಬರಬಹುದು, ಹಾಗೆಯೇ ಎಂದಾದರೂ ಬರಬಹುದು. ಸೃಷ್ಟಿ ಆದಿಯಲ್ಲಿ ಆಕಾಶವಾಣಿ ಮೂಲಕ ತಿಳಿಸಿರುವ ಜ್ಞಾನವು ಮನುಷ್ಯರಲ್ಲಿ ಸೇರದೇ ಹೋಗಿರುವುದರಿಂದ, ಅದನ್ನು ತಿಳಿಸುವ ನಿಮಿತ್ತ ಮನುಷ್ಯನಾದ ಕೃಷ್ಣನಾಗಿ ದೇವರು ಅವತರಿಸುವುದು ನಡೆಯಿತು. ಆದರೂ ಕೃಷ್ಣನು ಭೂಮಿ ಮೇಲಿರುವಾಗ ಒಬ್ಬ ಭೀಷ್ಮನು ಹೊರತು ಆತನನ್ನು ಯಾರೂ ಗುರುತಿಸಲಾರದೆ ಹೋದರು. ಕೃಷ್ಣನು ತನ್ನ ಜೀವನದ ಕೊನೆಯಲ್ಲಿ ತನ್ನ ಜ್ಞಾನವನ್ನು ಎಂದರೇ ಆಕಾಶವಾಣಿ ಮೂಲಕ ಹೇಳಿರುವ ಜ್ಞಾನವನ್ನು ಹೇಳಿಹೋಗುವುದು ನಡೆದಿದೆ. ಭಗವದ್ಗೀತೆಯನ್ನು ಹೇಳಿ ಇಲ್ಲಿಗೆ ಸುಮಾರು 5150 ವರ್ಷಗಳಾಗಿದೆ. ಈಗ ಭಗವದ್ಗೀತೆಯನ್ನು ಓದಿದ ನಾವು ಆತನು ಹೇಳಿರುವ ಜ್ಞಾನವನ್ನು ಅನುಸರಿಸಿ ಕೃಷ್ಣನು ಭಗವಂತನಾಗಿ ಬಂದಿರುವ ದೇವರೆಂದು ತಿಳಿಯಲಾಗಿದ್ದೇವೆ. ದೇವರು ಯಾವಾಗಲು ಕಾಣಿಸುವವನಾಗಿ ಬಂದರೂ ಆತನು ಭಗವಂತನೇ ಆಗುವನು. ಇದರಪ್ರಕಾರ ಕೃಷ್ಣನು ದೇವರೇ ಎಂದು, ದೇವರ ಅವತಾರವೆಂದು ಹೇಳಬಹುದು.

ದೇವರು ದ್ವಾಪರಯುಗದ ಕೊನೆಯಲ್ಲಿ ಕೃಷ್ಣನಾಗಿ ಜನ್ಮಿಸಿ, ವಾಣಿ ಮೂಲಕ ಬಂದ ಜ್ಞಾನವನ್ನು ಸಂಪೂರ್ಣವಾಗಿ ವಿವರಿಸಿ ಹೇಳಿಹೋಗಿದ್ದಾನೆ. ನಂತರ ಮೂರು ಸಾವಿರ ವರ್ಷಗಳಿಗೆ ಮತ್ತೊಂದು ಜನ್ಮ ತೆಗೆದುಕೊಂಡು ಜ್ಞಾನವನ್ನು ಬೋಧಿಸಬೇಕಾಗಿ ಬಂದಿದೆ. ಹಾಗೆ ಬಂದು ಹೋಗಿ ಇಲ್ಲಿಗೆ ಎರಡು ಸಾವಿರ ವರ್ಷಗಳಾಗಿದೆ. ದೇವರು ಒಬ್ಬನೇ ಆದರೂ ಐದುಸಾವಿರ ವರ್ಷಗಳ ಕಾಲಾವಧಿಯಲ್ಲಿ ಎರಡುಬಾರಿ ಭಗವಂತನಾಗಿ ಬಂದುಹೋಗುವುದು ನಡೆದಿದೆ. ಮೊದಲು ಕೃಷ್ಣನಾಗಿ ಬಂದು ಜ್ಞಾನವನ್ನು ಹೇಳಿಹೋದರೂ, ಅದೇ ಜ್ಞಾನವನ್ನೇ ಯೇಸು ಆಗಿ ಭೂಮಿ ಮೇಲಕ್ಕೆ ಬಂದ ಭಗವಂತನಾಗಿ ಕಾಣಿಸಿ ಹೇಳಿದ್ದಾನೆ. ದೇವರು ಒಬ್ಬನೇ ಆದರೂ ಕೃಷ್ಣನಾಗಿ, ಯೇಸು ಆಗಿ ಬಂದವನು ಒಬ್ಬನೇ ಆದರೂ, ಭೂಮಿಮೇಲೆ ಇಬ್ಬರಾಗಿ ಬಂದು ಹೋಗಿದ್ದಾನೆ. ಭಾರತ ದೇಶದಲ್ಲಿ ಮೊದಲು ಕೃಷ್ಣನಾಗಿ ಬಂದವನೇ ನಂತರ ಮೂರು ಸಾವಿರ ವರ್ಷಗಳಿಗೆ ಇಜ್ರಾಯಿಲ್ ದೇಶದಲ್ಲಿ ಯೇಸುಆಗಿ ಬರುವುದು ನಡೆದಿದೆ.

ಭಗವಂತನಾಗಿ ಎಷ್ಟು ಸಲ ಬಂದರೂ ಬಂದವನು ಒಬ್ಬನೇ ಆಗುವನು. ದೇವರು **ಒಬ್ಬನೇ ಇಬ್ಬರು** ಭಗವಂತರಾಗಿ ಬಂದಹಾಗೆ ತಿಳಿದಿದೆ. ಮೊದಲು ಬಂದಿರುವ ಅವತಾರವಾದ ಕೃಷ್ಣನದು ಹಿಂದೂಮತದಲ್ಲಿ ಇರುವಾಗ, ನಂತರ ಬಂದ ಯೇಸುವಿನದು ಕ್ರೈಸ್ತ ಮತದಲ್ಲಿ ಇದ್ದು ಹೋಗಿದೆ. ಯೇಸು ಹೇಳಿರುವ ಜ್ಞಾನವು ಕೃಷ್ಣನು ಹೇಳಿರುವ ಜ್ಞಾನವು ಒಂದೇ ಆದರೂ, ಇಬ್ಬರಾಗಿ ಬಂದವನು ಒಬ್ಬನೇ ಆದರೂ, ಕೃಷ್ಣನು ಮತ್ತು ಯೇಸು ಇಬ್ಬರು ಒಬ್ಬನೇ ಎಂದು ಮನುಷ್ಯರಿಗೆ ತಿಳಿದಿಲ್ಲ. ಇಬ್ಬರು ಒಬ್ಬರೇ ಎಂದು ತಿಳಿಯದೆ ಹೋಗಿರುವುದರಿಂದ ಕೃಷ್ಣನ ಹೆಸರನ್ನು ಕೇಳುತ್ತಲೇ ಕ್ರೈಸ್ತರು ಅಸೂಯೆ ಪಡುತ್ತಿದ್ದಾರೆ. ಹಾಗೆಯೇ ಯೇಸು ಹೆಸರು ಕೇಳುತ್ತಲೇ ಹಿಂದೂಗಳು ಅಸೂಯೆಯಿಂದ ಉರಿದು ಹೋಗುತ್ತಿದ್ದಾರೆ (ಆಕ್ರೋಶಗೊಳ್ಳುತ್ತಿದ್ದಾರೆ). ಇಬ್ಬರು ಹೇಳಿರುವ ಜ್ಞಾನವು ಒಂದೇ ಆದರೂ, ವಾಸ್ತವಕ್ಕೆ ಇಬ್ಬರು ಒಂದೇ ಆದರೂ, ಇತ್ತ ಹಿಂದೂಗಳಾಗಲಿ, ಅತ್ತ ಕ್ರೈಸ್ತರಾಗಲೀ 'ಇಬ್ಬರು ಒಂದೇ' ಎಂಬ ವಿಷಯವನ್ನು ತಿಳಿಯಲಾರದೆ ಹೋಗಿದ್ದಾರೆ.

ದೇವರು ಯಾವಾಗ ಬಂದರೂ ಆತನೊಬ್ಬನೇ ಬರಬೇಕಾಗಿರುತ್ತದೆ. ಬೇರೆಯವನು ಭಗವಂತನಾಗಿ ಬರುವುದಕ್ಕೆ ಆತನು (ದೇವರು) ಒಬ್ಬನು ಹೊರತು ಇತರರು ಯಾರೂ ಇಲ್ಲ. ದೇವರ ಜ್ಞಾನವು ದೇವರಿಗೇ ತಿಳಿದಿದೆ ಇತರರಿಗೆ ತಿಳಿದಿಲ್ಲ. ಆದಕಾರಣ ದೇವರೇ ಮನುಷ್ಯರಹಾಗಿರುವ ಭಗವಂತನಾಗಿ ಬರಬೇಕಾಗಿರುತ್ತದೆ. ಯಾವಾಗ ಬಂದರೂ, ಯಾವ ಆಕಾರದಲ್ಲಿ ಬಂದರೂ, ಯಾವ ಹೆಸರಿನೊಂದಿಗೆ ಬಂದರೂ ಬೋಧಿಸುವ ಬೋಧನೆ ಒಂದೇ, ಬೋಧಿಸುವವನು ಒಬ್ಬನೇ. ಆದ್ದರಿಂದ ದ್ವಾಪರ ಯುಗದ ಕೊನೆಯಲ್ಲಿ ಬಂದ ಕೃಷ್ಣನು, ಕಲಿಯುಗದಲ್ಲಿ ಬಂದ ಯೇಸು ಇಬ್ಬರೂ ಒಬ್ಬನೇಯೆಂದು ಹೇಳುತ್ತಿದ್ದೇವೆ. ಮನುಷ್ಯರಲ್ಲಿರುವ ಅಜ್ಞಾನದಿಂದ ಇಬ್ಬರು ಬೇರೆಬೇರೆ ವ್ಯಕ್ತಿಗಳಾಗಿ ಕಾಣಿಸಿದರೂ ಅವರಲ್ಲಿರುವವನು ಒಬ್ಬನೇ ಎಂದು ತಿಳಿಯಬೇಕು.

**ಪ್ರಶ್ನೆ:- ದೇವರು ಒಬ್ಬನೇ ಒಂದೇ ಕಾಲದಲ್ಲಿ ಇಬ್ಬರು ಭಗವಂತರಾಗಿ ಎರಡು ಶರೀರಗಳನ್ನು ಧರಿಸಿ ಇಬ್ಬರು ಮನುಷ್ಯರಾಗಿ ಬರಬಹುದಾ? ಬೇರೆಬೇರೆ ದೇಶಗಳಲ್ಲಿ**

**ಬೇರೆಬೇರೆ ಶರೀರಗಳನ್ನು ಧರಿಸಿದ ಭಗವಂತನು ಒಂದೇ ಕಾಲದಲ್ಲಿ ಇರುವುದಕ್ಕೆ ಅವಕಾಶವಿದೆಯಾ?**

**ಉತ್ತರ:–** ದೇವರು ಎಲ್ಲಾದರೂ ಒಂದುಕಾಲದಲ್ಲಿ ಒಂದು ಅವತಾರವಾಗಿಯೇ ಇರುವನು. ಒಂದೇ ಕಾಲದಲ್ಲಿ ಎರಡು ಮೂರು ಕಡೆಗಳಲ್ಲಿ ಇರುವುದಕ್ಕೆ ಸಾಧ್ಯವಾಗುವುದಿಲ್ಲ. ಒಂದುದೇಶದಲ್ಲಿ ಒಂದುಬಾರಿ ಬೋಧಿಸಿ ಹೋದ ನಂತರ ಸ್ವಲ್ಪಕಾಲಕ್ಕೆ ಎಂದರೇ ಕೆಲವು ಸಾವಿರ ವರ್ಷಗಳಿಗೆ ಮತ್ತೊಂದು ದೇಶದಲ್ಲಿ ಭಗವಂತನಾಗಿ ಅವತರಿಸಿ ಜ್ಞಾನವನ್ನು ಹೇಳಬಹುದು. ಅಷ್ಟೇ ಹೊರತು ಒಂದೇ ಕಾಲದಲ್ಲಿ ಭಗವಂತನು ಎರಡುಕಡೆ ಅವತರಿಸುವುದಿಲ್ಲ. ಒಬ್ಬ ಭಗವಂತನು ಹೋದ ನಂತರ ಎರಡನೆಯಬಾರಿ ಭಗವಂತನು ಬರುವುದಕ್ಕೆ ಅವಕಾಶವಿದೆ. ಆದ್ದರಿಂದ ಮಧ್ಯ ದೈವಗ್ರಂಥದಲ್ಲಿ ಯೋಹಾನ್ ಸುವರ್ತೆ 16ನೇ ಅಧ್ಯಾಯದಲ್ಲಿ 7ನೇ ವಚನದಲ್ಲಿ ಈ ವಿಧವಾಗಿ ಹೇಳಿದ್ದಾರೆ ನೋಡಿರಿ. **(ಯೋಹಾನ್ 16–7) "ನಾನು ಹೊರಟು ಹೋಗುವುದರಿಂದ ನಿಮಗೆ ಪ್ರಯೋಜನಕರ. ನಾನು ಹೋಗದೆ ಇದ್ದರೆ ಆದರಣ ಕರ್ತ ನಿಮ್ಮಬಳಿಗೆ ಬರುವುದಿಲ್ಲ. ನಾನು ಹೋದರೇ ಆತನನ್ನು ನಿಮ್ಮಬಳಿಗೆ ಕಳುಹಿಸುವೆನು".** ಈ ವಾಕ್ಯವನ್ನು ಅನುಸರಿಸಿ ಭಗವಂತನಾಗಿರುವ ಯೇಸು ಹೋದ ನಂತರ ಸ್ವಲ್ಪಕಾಲಕ್ಕೆ ಆದರಣ ಕರ್ತನೆಂಬ ಭಗವಂತನು ಬರುವನೆಂದು ತಿಳಿಯುತ್ತಿದೆ. ಒಬ್ಬರು ಇರುವಾಗಲೇ ಮತ್ತೊಬ್ಬರು ಬರುವುದಿಲ್ಲವೆಂದು **"ನಾನು ಹೋಗದೆ ಇದ್ದರೆ ಆದರಣಕರ್ತ ನಿಮ್ಮ ಬಳಿಗೆ ಬರುವುದಿಲ್ಲ"** ಎಂದು ಕೂಡಾ ವಾಕ್ಯದಲ್ಲಿ ಹೇಳಿರುವುದನ್ನು ಅನುಸರಿಸಿ ಒಬ್ಬ ಭಗವಂತನು ಭೂಮಿಮೇಲಿರುವಾಗ ಮತ್ತೊಬ್ಬ ಭಗವಂತನು ಬರುವುದಿಲ್ಲ ವೆಂದು ತಿಳಿಯುತ್ತಿದೆ.

**ಪ್ರಶ್ನೆ:– ಒಂದು ಸಲ ಭಗವಂತನು ಬಂದಾಗ ಆತನು ಹೇಳಿರುವ ಜ್ಞಾನವನ್ನು ಕೇಳಿರುವವರು ಕರ್ಮ ಪೂರ್ತಿ ಮುಗಿದುಹೋಗದೆ, ಅವರು ಕೂಡಾ ಪೂರ್ತಿ ಜ್ಞಾನಿಗಳಾಗದೆ ಹೋಗಿರುವ ಕಾರಣ, ಇನ್ನೂ ತಿಳಿಯಬೇಕಾಗಿರುವುದು ಇರುವುದರಿಂದ, ಅವರು ಮೋಕ್ಷವನ್ನು ಹೊಂದದೆ ಜನನ ಮರಣಗಳು ಪಡೆಯುತ್ತಾ**

**ಎರಡುಸಾವಿರ ವರ್ಷಗಳು ಕಳೆದಿದ್ದಾರೆಂದುಕೊಳ್ಳೋಣ. ಎರಡುಸಾವಿರ ವರ್ಷಗಳಿಗೆ ದೇವರು ಭಗವಂತನಾಗಿ ಹೊಸ ಶರೀರದೊಂದಿಗೆ, ಹೊಸ ಹೆಸರಿನಿಂದ ಹುಟ್ಟಿದ್ದಾನೆಂದುಕೊಳ್ಳೋಣ. ಆಗ ಮೊದಲು ಜ್ಞಾನ ಕೇಳಿದ ಭಕ್ತರು ಎರಡನೆಯಬಾರಿ ಬಂದ ಭಗವಂತನನ್ನು ಮೊದಲು ಎರಡುಸಾವಿರ ವರ್ಷಗಳಾಗ ನೋಡಿದಹಾಗೆಯೇ ಆತನನ್ನು ಗುರಿತಿಸಬಲ್ಲರಾ? ಹೆಸರು, ಆಕಾರ ಬದಲಾಗಿ ಹೋಗಿರುವುದರಿಂದ ಗುರುತಿಸಬಲ್ಲರಾ?**

**ಉತ್ತರ:–** ಜ್ಞಾನದೊಂದಿಗೆ ಸಂಬಂಧವಿಲ್ಲದವರು ಯಾರೂ ಎರಡನೆಯ ಸಲ ಬಂದ ಭಗವಂತನನ್ನು ಗುರುತಿಸಲಾರರು. ಆದರೇ ಪೂರ್ವವು ಜ್ಞಾನ ಕೇಳಿರುವವರು ಭಗವಂತನು ಎರಡನೆಯ ಸಲ ಬಂದಾಗ, ಅವರು ಎಷ್ಟೋ ಜನ್ಮಗಳಲ್ಲಿದ್ದರೂ ಭಗವಂತನನ್ನು ಗುರುತಿಸಬಲ್ಲರು. ಆತನೇ ಈತನೆಂದು ಹೇಳಬಲ್ಲರು. ಆ ವಿಷಯವನ್ನು ಕುರಿತು ದ್ವಿತೀಯ ದೈವಗ್ರಂಥದಲ್ಲಿ ಹೀಗೆ ಇದೆ ನೋಡಿರಿ. **(ಯೋಹಾನ್ 14–16, 17, 18, 19) ನಾನು ತಂದೆಯನ್ನು ಬೇಡಿಕೊಳ್ಳುವೆನು. ನಿಮ್ಮಬಳಿ ಯಾವಾಗಲೂ ಇರುವುದಕ್ಕಾಗಿ ಬೇರೆಯೊಬ್ಬ ಆದರಣಕರ್ತನನ್ನು ಎಂದರೇ ಸತ್ಯಸ್ವರೂಪಿಯಾದ ಆತ್ಮನನ್ನು ನಿಮಗನುಗ್ರಹಿಸುವೆನು. ಲೋಕವು ಆತನನ್ನು ನೋಡುವುದಿಲ್ಲ, ಆತನನ್ನು ತಿಳಿಯುವುದಿಲ್ಲ. ಆದಕಾರಣ ಆತನನ್ನು ಪಡೆಯಲಾರರು. ನೀವು ಆತನನ್ನು ಗ್ರಹಿಸುವಿರಿ. ಆತನು ನಿಮ್ಮೊಂದಿಗೆ ಕೂಡಾ ನಿವಾಸಿಸುವನು. ನಿಮ್ಮಲ್ಲಿ ಇರುತ್ತಾನೆ. (18) ನಿಮ್ಮನ್ನು ಅನಾಥರಾಗಿ ಬಿಡುವುದಿಲ್ಲ. ನಿಮ್ಮ ಬಳಿಗೆ ಬರುವೆನು. ಸ್ವಲ್ಪ ಕಾಲವಾದ ನಂತರ ಲೋಕವು ನನ್ನನ್ನು ಇನ್ನೆಂದಿಗೂ ನೋಡುವುದಿಲ್ಲ. (19) ಆದರೇ ನೀವು ನನ್ನನ್ನು ನೋಡುವಿರಿ. ನಾನು ಜೀವಿಸುತ್ತಿದ್ದೇನೆ ಆದಕಾರಣ ನೀವೂಸಹ ಜೀವಿಸುವಿರಿ. (ಯೋಹಾನ್ 15–26,27) ತಂದೆ ಬಳಿಯಿಂದ ನಿಮ್ಮಬಳಿಗೆ ಕಳುಹಿಸಲ್ಪಡುವ ಆದರಣಕರ್ತ ಎಂದರೇ ತಂದೆಬಳಿಯಿಂದ ಬರುವ ಸತ್ಯಸ್ವರೂಪಿಯಾದ ಆತ್ಮ ಬಂದಾಗ ಆತನು ನನ್ನನ್ನು ಕುರಿತು ಸಾಕ್ಷಿ ನೀಡುವನು. ನೀವು ಮೊದಲಿನಿಂದಲು ನನ್ನ ಬಳಿ ಇದ್ದೀರ ಆದಕಾರಣ ನೀವುಸಹ ಸಾಕ್ಷಿ ನೀಡುವಿರಿ."**

ಮೇಲಿನ ವಾಕ್ಯಗಳನ್ನು ಅನುಸರಿಸಿ ದೇವರು ಭಗವಂತನಾಗಿ ಬರುವುದನ್ನು ಆಗಿರುವವರೇ ಈಗ ಇರುವುದರಿಂದ ಆತನನ್ನು ಗುರುತು ಹಿಡಿಯಬಲ್ಲರೆಂದು ಹೇಳಿದ್ದಾರೆ. ಮೇಲಿನ ವಾಕ್ಯಗಳಲ್ಲಿ ಆದರಣಕರ್ತ ಎಂಬ ಹೆಸರನ್ನು ಭಗವಂತನೆಂದು ಹೇಳುವುದಕ್ಕಾಗಿ ಉಪಯೋಗಸಲಾಗಿದೆ ಎಂದು ತಿಳಿಯಬೇಕು. ಕೊನೆಯಲ್ಲಿ ಹೇಳಿರುವ ವಾಕ್ಯದಲ್ಲಿ **"ತಂದೆಬಳಿಯಿಂದ ಹೊರಡುವ ಸತ್ಯಸ್ವರೂಪಿಯಾದ ಆತ್ಮ ಬಂದಾಗ ಆತನು ನನ್ನನ್ನು ಕುರಿತು ಸಾಕ್ಷಿಕೊಡುವನು"** ಎಂದು ಹೇಳಲ್ಪಟ್ಟಿದೆ. ಎರಡನೆಯ ಬಾರಿ ಬಂದ ಆದರಣಕರ್ತ (ಭಗವಂತನು) ಮೊದಲು ಬಂದುಹೋಗಿರುವ ಭಗವಂತನನ್ನು ಕುರಿತು ಹೇಳಬಲ್ಲನು. ಹಾಗೆ ಹೇಳದೇ ಹೋದರೇ ಮೊದಲು ಬಂದಿರುವ ಭಗವಂತನು ಯಾರೋ ಮನುಷ್ಯರಿಗೆ ತಿಳಿಯುವುದಿಲ್ಲ. ನಂತರ ಬಂದಿರುವವನು ಮೊದಲು ಬಂದಿರುವವನೇ ಆಗಿರುವುದರಿಂದ ಮೊದಲು ಬಂದುಹೋಗಿರುವ ಭಗವಂತನು ಇಂಥವನೇ ಎಂದು ಹೇಳಬಲ್ಲನು. ಹಾಗೆ ಸಾಕ್ಷಿಕೊಡುವುದರಿಂದ ಮೊದಲು ಬಂದು ಹೋಗಿರುವ ಭಗವಂತನು ಯಾರಾಗಿರುವುದು ಮನುಷ್ಯರಿಗೆ ತಿಳಿಯುವುದು. ಇಲ್ಲದೇ ಹೋದರೇ ಮೊದಲನೆಯವನನ್ನು ಗುರುತಿಸುವುದಕ್ಕೆ ಮನುಷ್ಯರಿಗೆ ಸಾಧ್ಯವಾಗುವುದಿಲ್ಲ. ಭಗವಂತನಾಗಿ ಬಂದವನು ತಾನು ಯಾರಾಗಿರುವುದು ತಿಳಿಯದೇ ನಟಿಸಿ, ಮನುಷ್ಯನಹಾಗೆ ಪ್ರವರ್ತಿಸಿ ಜ್ಞಾನವನ್ನು ಹೇಳಿಹೋಗುವನು. ಆದರೂ ಆತನು ಹೇಳಿರುವ ಜ್ಞಾನವನ್ನು ನೋಡದೇ, ಆತನು ಅನುಭವಿಸಿರುವ ಕಷ್ಟಸುಖಗಳನ್ನು ಮನುಷ್ಯರು ನೋಡುವುದರಿಂದ ಬಂದಿರುವವನು ದೇವರೇ ಎಂದು ಗುರುತಿಸಲಾರರು. ದೇವರು ಭಗವಂತನಾಗಿ ಬಂದುಹೋಗಿರುವ ವಿಷಯವು ಎರಡನೆಯಬಾರಿ ಬಂದ ಭಗವಂತನು ಹೇಳಿದಾಗಲೇ ತಿಳಿಯುವುದೆಂದು ಮೇಲಿನ ವಾಕ್ಯದಲ್ಲಿ ಹೇಳಿರುವುದಾಗಿದೆ.

ಇಲ್ಲಿ ದ್ವಿತೀಯ ದೈವಗ್ರಂಥದಲ್ಲಿ ಯೇಸು ಹೆಸರಿನೊಂದಿಗೆ ಬಂದಿರುವವನು ಆದರಣಕರ್ತನೇ ಎಂದು (ಭಗವಂತನೇ ಎಂದು) ಅರ್ಥವಾಗುವಂತೆ ಮುಂಬರುವ ಆದರಣಕರ್ತ ತಿಳಿಸುವನೆಂದು ಹೇಳುವುದಾಗಿದೆ. ಮೊದಲನೆಯವನು ಆದರಣಕರ್ತನೇ ಎಂದು ತಿಳಿಸುವ ಉದ್ದೇಶದಿಂದ ಇಲ್ಲಿ ಯೋಹಾನ್

14ನೇ ಅಧ್ಯಾಯ 16ನೇ ವಚನದಲ್ಲಿ ಹೀಗಿದೆ ನೋಡಿರಿ. **(ಯೋಹಾನ್ 14–16) "ನಿಮ್ಮಬಳಿ ಯಾವಾಗಲೂ ಇರುವುದಕ್ಕಾಗಿ ಆತನು ಬೇರೆಯೊಂದು ಆದರಣಕರ್ತನನ್ನು" ಎಂದರೇ ಸತ್ಯಸ್ವರೂಪಿಯಾದ ಆತ್ಮನನ್ನು ನಿಮಗೆ ಅನುಗ್ರಹಿಸುವನು."** ಈ ವಾಕ್ಯವನ್ನು ಅನುಸರಿಸಿ ಬೇರೊಬ್ಬ ಆದರಣ ಕರ್ತನನ್ನು ಎಂದು ಹೇಳುವುದರಿಂದ ಪ್ರಸ್ತುತ ಮಾತನಾಡುವವನು ಕೂಡಾ ಆದರಣಕರ್ತನೇ ಎಂದು ಅರ್ಥವಾಗುವುದು. ಇದನ್ನು ಅನುಸರಿಸಿ ದ್ವಿತೀಯ ದೈವಗ್ರಂಥದಲ್ಲಿರುವ ಆದರಣಕರ್ತನನ್ನು ಎಂದರೇ ಭಗವಂತನ ನಂತರ ಭವಿಷ್ಯತ್ತಿನಲ್ಲಿ ಬರುವ ಆದರಣಕರ್ತ ಹೇಳಬಲ್ಲನೆಂದು ತಿಳಿದುಹೋಗಿದೆ. ಅದೇ ವಿಧಾನದ ಪ್ರಕಾರವೇ ಯೇಸುಗಿಂತಲೂ ಮೊದಲು ಬಂದು ಭಗವದ್ಗೀತೆಯನ್ನು ಹೇಳಿ ಹೋಗಿರುವ ಭಗವಂತನನ್ನು ಯೇಸು ಗುರುತಿಸಿ ಕೃಷ್ಣನು ದೇವರಾದ ಭಗವಂತನೆಂದು ಹೇಳಬೇಕಾಗಿದೆ. ದ್ವಾಪರ ಯುಗದಲ್ಲಿ ಬಂದ ಕೃಷ್ಣನನ್ನು ಕುರಿತು ಯೇಸು ಸಾಕ್ಷಿನೀಡಿದ್ದಾನೆ. ಆತನು ಹೇಗೆ ಸಾಕ್ಷಿನೀಡಿರುವುದು ಆತನ ಜೀವನವನ್ನು ನೋಡಿದಂತಾದಾದರೇ ಅರ್ಥವಾಗಬಲ್ಲದು. ಯೇಸು ಜೀವನ ಚರಿತ್ರೆಯನ್ನು, ಕೃಷ್ಣನ ಜೀವನ ಚರಿತ್ರೆಯನ್ನು ಒಂದಕ್ಕೊಂದು ಹೋಲಿಸಿ ನೋಡುವುದಾದರೇ ಯೇಸು, ಕೃಷ್ಣನು ಒಬ್ಬನೇ ಇಬ್ಬರೆಂದು ತಿಳಿಯಬಲ್ಲದು. ಒಂದೇ ದೇವರು ಇಬ್ಬರಾಗಿ ಬಂದಿದ್ದಾನೆಂದು ತಿಳಿಯುವುದೇ ಅಲ್ಲದೇ ಮೂರನೆಯಬಾರಿ ಬಂದ ಆದರಣಕರ್ತ ಯೇಸು ಇಂಥವನು ಎಂದು ಹೇಳುವುದರಿಂದ ಯೇಸು ಯಾರಾಗಿರುವುದು ಸುಲಭವಾಗಿ ತಿಳಿಯಬಲ್ಲದು. ಕೃಷ್ಣನನ್ನು ಯೇಸನ್ನು ನೋಡಿ ಒಬ್ಬನೇ ಇಬ್ಬರೆಂದು ಹೇಳಬಹುದು. ಹಾಗೆಯೇ ಯೇಸುನನ್ನು ಮುಂಬರುವ ಆದರಣಕರ್ತನನ್ನು ನೋಡಿ ಇಬ್ಬರು ಒಬ್ಬರೇ ಎಂದು ಹೇಳಬಹುದು. ಮೊದಲು ಒಬ್ಬನೇ ಇಬ್ಬರೆಂಬ ವಿಷಯವನ್ನು ಕುರಿತು ಸಾಕ್ಷಿಯಾಗಿ ಗತದಲ್ಲಿ ನಾವು ಬರೆದಿರುವ **"ಶ್ರೀಕೃಷ್ಣನು ದೇವರಾ ಭಗವಂತನಾ"** ಎಂಬ ಗ್ರಂಥದಲ್ಲಿನ ಒಂದು ವಿಭಾಗವಾದ **"ಶ್ರೀಕೃಷ್ಣನ ಮರಣವು ಲೋಕಕ್ಕೆ ಕಣ್ತೆರೆ"** ಎಂಬ ಸಮಾಚಾರವನ್ನು ನೋಡೋಣ. ಈ ಗ್ರಂಥದಲ್ಲಿನ ಸಮಾಚಾರವೆಲ್ಲವೂ ನೋಡಿದ ನಂತರ **ಒಬ್ಬನೇ ಇಬ್ಬರು** ಎಂದು ಪೂರ್ತಿಯಾಗಿ

ತಿಳಿಯಬಲ್ಲದು. ನಂತರ ಬಂದ ಆದರಣಕರ್ತ, ಬಂದುಹೋಗಿರುವ ಯೇಸು ಇಬ್ಬರು ಒಬ್ಬನೇ ಎಂದು ಕೂಡಾ ತಿಳಿಯಬಲ್ಲದು. ಇದನ್ನು ಅನುಸರಿಸಿ ಪೂರ್ತಿ ವಿವರವಾಗಿ ಹೇಳಿದರೇ ದ್ವಾಪರಯುಗದಲ್ಲಿ ಬಂದ ಆದರಣಕರ್ತ ಕೃಷ್ಣನು, ಕಲಿಯುಗದಲ್ಲಿ ಬಂದ ಆದರಣಕರ್ತ ಯೇಸು, ಕಲಿಯುಗದಲ್ಲಿಯೇ ಮುಂಬರುವ ಅಥವಾ ಬಂದಿರುವ ಆದರಣಕರ್ತ ಮೂವರು ಒಬ್ಬರೇ ಎಂದು ಕೂಡಾ ಹೇಳಬಹುದು. ಒಬ್ಬನೇ ಇಬ್ಬರು ಎಂಬ ವಿಷಯವನ್ನು ಕುರಿತು ಮೊದಲು ಬರೆದಿರುವ ಗ್ರಂಥದಲ್ಲಿನ ಸಮಾಚಾರವನ್ನು ಈಗ ನೋಡೋಣ.

# ಕೃಷ್ಣನ ಮರಣವು ಲೋಕಕ್ಕೆ ಕಣ್ತೆರೆ

ಕ್ರಿಸ್ತ ಪೂರ್ವ 02–02–3102ನೇ ವರ್ಷವು ಕೃಷ್ಣನು ಮರಣಿಸಿದ್ದಾನೆ. ಜನವರಿ 14 ತಾರೀಖು ನಂತರ ಉತ್ತರಾಯಣ ಕಾಲ ಬರುತ್ತದೆ. ಆದಕಾರಣ ಕೃಷ್ಣನು ಮರಣಿಸಿರುವುದು ಉತ್ತರಾಯಣದಲ್ಲೇ ಎಂದು ತಿಳಿಯುತ್ತಿದೆ. ಒಂದುದಿನ ಕೃಷ್ಣನು ಒಂದು ಗಿಡದಪೊದೆಯಬಳಿ ಕಾಲಿನ ಮೇಲೆ ಕಾಲು ಇಟ್ಟುಕೊಂಡು ಮಲಗಿಕೊಂಡು ಕಾಲನ್ನು ಕದಲಿಸುತ್ತಿರುವಾಗ, ಆ ಪ್ರಾಂತಕ್ಕೆ ಬೇಟೆಗಾಗಿ ಬಂದ ಬೇಟೆಗಾರ ಪೊದೆಯಮರೆಯಲ್ಲಿ ಕಾಲು ಕದಲುವುದನ್ನು ನೋಡಿ, ಅಲ್ಲಿ ಜಿಂಕೆ ಕದಲುತ್ತಿದೆಯೆಂದು ತಿಳಿದು ತಪ್ಪಾಗಿ ಅರ್ಥ ಮಾಡಿಕೊಂಡು ಬಾಣವನ್ನು ಹೊಡೆದಾಗ, ಅದು ಕೃಷ್ಣನ ಬಲಗಾಲಿನ ಹೆಬ್ಬೆರಳಿಗೆ ತಾಕಿತು. ಹೆಬ್ಬೆರಳಿಗೆ ಸಿಲುಕಿಕೊಂಡ ಬಾಣದಿಂದ ಕೃಷ್ಣನ ಶರೀರದಿಂದ ರಕ್ತವು ಸೋರಿಹೋಗಿ ಆತನು ಸಾಯುವುದು ನಡೆಯಿತು. ವಿಶ್ವವ್ಯಾಪಕವಾಗಿ ಅಣುವಣುವೂ ಇರುವ ಶಕ್ತಿ ಯಾವುದೋ, ಆ ಶಕ್ತಿಯಲ್ಲಿನ ಭಾಗವು ಒಂದು ಶರೀರವನ್ನು ಏರ್ಪ ಡಿಸಿಕೊಂಡು ಬಂದು, 126 ವರ್ಷಗಳು ಮಾನವರೊಂದಿಗೆ ಸಹಜೀವನ ಮಾಡಿ ತನ್ನ ಧರ್ಮಗಳನ್ನು ತಿಳಿಸಿ, ಶರೀರದಲ್ಲಿ ಇಲ್ಲದೇ ಎಲ್ಲೆಡೆ ಇರುವ ತನ್ನ ಶಕ್ತಿಯಲ್ಲಿ ಬೆರೆತುಹೋಗಿದೆ. ಹಾಗೆ ಬಂದುಹೋಗಿರುವುದು ಸಾಧಾರಣ ಜೀವಾತ್ಮವಲ್ಲ, ಪರಮಾತ್ಮ ಶಕ್ತಿ ಎಂದು ಒಬ್ಬ ಭೀಷ್ಮನಿಗೆ ಹೊರತು ಯಾರಿಗೂ

ತಿದಿಲ್ಲ. ಭೀಷ್ಮನು ಕೃಷ್ಣನಿಗಿಂತ ಮೊದಲೇ ಸತ್ತುಹೋದನು. ಆದ್ದರಿಂದ ಕೃಷ್ಣನು ಸತ್ತುಹೋದಾಗ ಆ ಶರೀರದಲ್ಲಿನ ಜೀವಾತ್ಮವಾಗಿ ಇಷ್ಟುಕಾಲವಿರುವುದು ದೈವಶಕ್ತಿ ಎಂದು ಯಾರಿಗೂ ತಿಳಿದಿಲ್ಲ. 126 ವರ್ಷಗಳು ಶರೀರದೊಂದಿಗೆ ಬದುಕಿದ ಆ ಶಕ್ತಿಯ ಹೆಸರು **"ಕೃಷ್ಣ"** ಎಂಬ ಎರಡಕ್ಷರಗಳು ಮಾತ್ರವೇ. ಕೃಷ್ಣ ಎಂಬ ಶಬ್ಧದ ಒಂದು ಅರ್ಥವು ಕಪ್ಪನೆಯ ಬಣ್ಣ ಎಂದು ತಿಳಿಯುತ್ತಿದೆ. ಕೃಷ್ಣ ಪದವು ಕಪ್ಪನೆಯ ಬಣ್ಣವನ್ನು ತಿಳಿಸುತ್ತಿದೆ. ಕತ್ತಲೆ ಕಪ್ಪಾಗಿರುತ್ತದೆ. ಕಗ್ಗತ್ತಲಲ್ಲಿ ಏನೂ ಕಾಣಿಸದೆ ಕಪ್ಪನೆಯ ಬಣ್ಣ ಮಾತ್ರ ಗೋಚರವಾಗುತ್ತಿದೆ. ಮನುಷ್ಯ ಯಾವಾಗಲು ಯಾವುದೋ ಒಂದು ಕಾಣಿಸುವ ಬೆಳಕನ್ನೇ ಕೋರಿಕೊಳ್ಳುತ್ತಾನೆ. ಆದರೇ ಏನೂ ಕಾಣಿಸದ ಕತ್ತಲೆಯನ್ನು ಕೋರಿಕೊಳ್ಳುವುದಿಲ್ಲ. ಅದೇ ವಿಧವಾಗಿ ಭೂಮಿಮೇಲೆ ಪ್ರತಿ ಮನುಷ್ಯ ಯಾವುದೋ ಒಂದು ವಿಷಯವನ್ನು ತಿಳಿಸುವ ಮಾಯೆಯನ್ನೇ ಕೋರಿಕೊಳ್ಳುತ್ತಾನೆ. ಆದರೇ ಯಾವ ವಿಷಯವಿಲ್ಲದ, ಯಾವ ಗುಣಗಳಿಲ್ಲದ ದೈವವನ್ನು ಕೋರಿಕೊಳ್ಳುವುದಿಲ್ಲ. ದೇವರು ಯಾರಿಗೂ ಕಾಣಿಸುವವನಲ್ಲ. ದೇವರನ್ನು ಯಾರೂ ಕೋರಿಕೊಳ್ಳುತ್ತಿಲ್ಲ ಎಂದು ತಿಳಿಯುವುದಕ್ಕೆ ಗುರುತಾಗಿ ಭಗವಂತನು ತನ್ನ ಹೆಸರಾಗಿ ಕಪ್ಪನೆಯ ಬಣ್ಣಕ್ಕೆ ಗುರುತಾದ ಕಪ್ಪು (ಕೃಷ್ಣ) ಎಂಬ ಹೆಸರನ್ನು ಇಟ್ಟುಕೊಂಡಿದ್ದಾನೆ.

ವಿಶ್ವವೆಲ್ಲಾ ವ್ಯಾಪಿಸಿ ಯಾರಿಗೂ ತಿಳಿಯದ ಶಕ್ತಿಯೇ ಕೃಷ್ಣ ಶರೀರದಲ್ಲಿದ್ದು ಕೊನೆಗೆ ಮರಣಿಸಿದೆ. ಕೃಷ್ಣ ಶರೀರದಲ್ಲಿನ ಶಕ್ತಿಯೂ ಹೊರಗೆ ವಿಶ್ವವೆಲ್ಲಾ ಅಣುವಣುವೂ ವ್ಯಾಪಿಸಿರುವ ಶಕ್ತಿಯೂ ಎರಡೂ ಒಂದೇ. ಆದಕಾರಣ ನೀರು ನೀರಿನಲ್ಲಿ ಬೆರೆತು ಹೋಗುವಂತೆ, ಹೊರಗಿನ ಶಕ್ತಿ, ಕೃಷ್ಣ ಶರೀರದಲ್ಲಿನ ಶಕ್ತಿ ಎರಡು ಒಂದಾಗಿ ಬೆರೆತುಹೋಗಿವೆ. ಹುಟ್ಟಿದ ಮನುಷ್ಯ ಯಾರಾದರೂ ಸತ್ತ ನಂತರ ಜನ್ಮಿಸದೇ ಮೋಕ್ಷವನ್ನು ಹೊಂದಬೇಕೆಂದರೇ ದೇವರಲ್ಲಿ ಬೆರೆತು ಹೋಗಬೇಕೆಂದರೇ ಭಗವದ್ಗೀತೆಯಲ್ಲಿ ಹೇಳಿರುವ ಸೂತ್ರದ ಪ್ರಕಾರ ಸತ್ತುಹೋಗಿರುವ ವ್ಯಕ್ತಿ ಯೋಗಿಯಾಗಿರಬೇಕು. ಸತ್ತುಹೋದ ಯೋಗಿ ಉತ್ತರಾಯಣ, ಶುಕ್ಲಪಕ್ಷ, ಹಗಲು, ಸೂರ್ಯರಶ್ಮಿ ಇರುವ ಸಮಯದಲ್ಲಿ

ಸತ್ತುಹೋಗಿರಬೇಕು. ಅಂಥವನು ಮಾತ್ರ ಮೋಕ್ಷವನ್ನು ಹೊಂದುವನು. ಈ ಸೂತ್ರವನ್ನು ಹೇಳಿರುವ ಕೃಷ್ಣನು ಈ ಸೂತ್ರದ ಪ್ರಕಾರ ಸತ್ತುಹೋಗಿದ್ದಾನಾ? ಎಂದು ಕೇಳಬಹುದು. ಅದಕ್ಕೆ ಸಮಾಧಾನ ಏನೆಂದರೇ! ಗೀತೆಯಲ್ಲಿ ಹೇಳಿರುವ ಸೂತ್ರದ ಪ್ರಕಾರ ಕೃಷ್ಣನು ಕರ್ಮಯೋಗಿಯಾಗಿ ಇದ್ದಾನೆ. ಉತ್ತರಾಯಣದಲ್ಲೇ ಹಗಲಿನವೇಳೆ, ಸೂರ್ಯರಶ್ಮಿ ಇರುವ ಸಮಯದಲ್ಲಿಯೇ ಸತ್ತುಹೋಗಿದ್ದಾನೆ. ಆದರೇ ಆತನು ಸತ್ತುಹೋಗಿರುವುದು ಶುಕ್ಲಪಕ್ಷವಲ್ಲ. ಕೃಷ್ಣಪಕ್ಷದಲ್ಲಿ ಸತ್ತುಹೋಗಿದ್ದಾನೆ. ಮೋಕ್ಷವನ್ನು ಹೊಂದಬೇಕಾಗಿರುವ ಯೋಗಿ ಶುಕ್ಲಪಕ್ಷದಲ್ಲಿ ಮರಣಿಸಬೇಕಾಗಿದೆ. ಆದರೇ ಕೃಷ್ಣನು ಕೃಷ್ಣಪಕ್ಷದಲ್ಲಿ ಮರಣಿಸಿರುವುದರಿಂದ, ಭಗವದ್ಗೀತೆಯಲ್ಲಿ ಭಗವಂತನಾದ ಕೃಷ್ಣನು ಹೇಳಿರುವ ಸೂತ್ರದ ಪ್ರಕಾರ ಕೃಷ್ಣನೇ ಮೋಕ್ಷಕ್ಕೆ ಹೋಗಲಿಲ್ಲವೆಂದು, ಪುನಃ ಜನ್ಮಕ್ಕೆ ಹೋಗಿರುವನೆಂದು ಹೇಳಬಹುದು. ಆದರೇ ಕೃಷ್ಣನು ದೇವರೊಳಗೇ ಹೋಗಿದ್ದಾನೆ, ಆದರೇ ಜನ್ಮಕ್ಕೆ ಹೋಗಲಿಲ್ಲ. ಇಲ್ಲಿ ಕೃಷ್ಣನು ಭಗವದ್ಗೀತೆಯಲ್ಲಿ ಹೇಳಿರುವ ಸೂತ್ರವು ಕೃಷ್ಣನಿಗೆ ಅನ್ವಯಿಸುವು ದಿಲ್ಲವಾ ಎಂದು ಕೆಲವರು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೇ! ನೀರು ನೀರಿನೊಳಗೆ ಬೆರೆಯುವುದಕ್ಕೆ ಯಾವ ಅಡ್ಡಿಯೂ ಇಲ್ಲ. ಆದರೇ ಮಂಜಿನ ಗಡ್ಡೆಗಳು ನೀರಿನಲ್ಲಿ ಬೆರೆಯಬೇಕೆಂದರೇ ಅವು ನೀರಾಗಿ ಬದಲಾಗುವು ದಕ್ಕೆ ಉಷ್ಣೋಗ್ರತೆ ಅವಶ್ಯ. ಕೃಷ್ಣನು ಹೇಳಿರುವುದು ಮಂಜಿನ ಗಡ್ಡೆಗಳು ನೀರಾಗಿ ಬದಲಾಗುವುದಕ್ಕೆ ಉಷ್ಣೋಗ್ರತೆ ಅವಶ್ಯವೆನ್ನುವಂತೆ "ಮನುಷ್ಯರು ದೇವರಾಗಿ ಬದಲಾಗುವುದಕ್ಕೆ ಇಂತಹ ಸಮಯದಲ್ಲಿಯೇ ಮರಣವನ್ನು ಹೊಂದಬೇಕು" ಎಂದು ಹೇಳಿದ್ದಾನೆ. ಕೃಷ್ಣನು ನೀರಿನಂಥವನು ಆದಕಾರಣ ಮರಣಕಾಲ ನಿಯಮವು ಆತನಿಗೆ ಇಲ್ಲ. ಆದರೇ ಮನುಷ್ಯರು ಮಂಜಿನ ಗಡ್ಡೆಗಳಂಥವರು ಅವರಿಗೆ ಉಷ್ಣವೆಂಬ ಜ್ಞಾನ ಅವಶ್ಯ. ಆದಕಾರಣ ಅವರಿಗೆ ಮರಣಕಾಲ ನಿಯಮವಿದೆ. **"ಜಗವನ್ನೇ ಅರಿತ ಬ್ರಾಹ್ಮಣನಿಗೆ ಜನಿವಾರವೇಕೆ"** ಎಂದಂತೆ ಕಾಲವೇ ತಾನಾಗಿರುವವನಿಗೆ ಮರಣಕಾಲ ನಿಯಮವು ಅನ್ವಯಿಸುವುದಿಲ್ಲ. ಕರ್ಮವೆಂಬ ಚಳಿಗೆ ಗಡ್ಡೆಕಟ್ಟಿದ ಮನುಷ್ಯರಿಗೆ ಶಾಖ ಎಂಬ ಜ್ಞಾನವು ಅವಶ್ಯ. ಆದ್ದರಿಂದ ಸಾಧಾರಣ ಮನುಷ್ಯರಿಗೆ ಮಾತ್ರವೇ ಮರಣಕಾಲ ನಿಯಮವು

ಅನ್ವಯಿಸುವುದೆಂದು ತಿಳಿಯಬೇಕು. ಮರಣಕಾಲವು ತನಗೆ ಅನ್ವಯಿಸುವುದಿಲ್ಲವೆಂದು ತಿಳಿಸುವ ನಿಮಿತ್ತವೇ ಆತನು ಕೃಷ್ಣಪಕ್ಷದಲ್ಲೇ ಸತ್ತುಹೋಗಿದ್ದಾನೆ.

ಪೊದೆಯ ಮರೆಯಲ್ಲಿ ತಣ್ಣನೆಯ ನೆರಳಿನಲ್ಲಿ ಮಲಗಿಕೊಂಡಿದ್ದ ಕೃಷ್ಣನನ್ನು ಬೇಟೆಗಾರ ಬೇಟೆಯ ನಿಮಿತ್ತ ಅಲ್ಲಿಗೆ ಬಂದು, ಕದಲುತ್ತಿದ್ದ ಕಾಲನ್ನು ಜಿಂಕೆ ಎಂದುಕೊಂಡು ಬಾಣಹೊಡೆದಾಗ, ಅದು ಕೃಷ್ಣನ ಬಲಗಾಲಿನ ಹೆಬ್ಬೆರಳನ್ನು ತಾಕಿ ರಕ್ತ ಸೋರುತ್ತಿದ್ದ ಸಮಯದಲ್ಲಿ, ಆ ಬೇಟೆಗಾರ ಬಂದು ನೋಡಿ ನಾನು ಎಂಥಾ ಕೆಲಸ ಮಾಡಿದ್ದೇನೆಂದು ಶೋಕಿಸುತ್ತಿದ್ದಾಗ, ಕೃಷ್ಣನು ಹೀಗೆ **"ನೀನು ಬಾಧೆಪಡಬೇಕಾಗಿರುವುದು ಏನೂ ಇಲ್ಲ. ನಿರ್ಣಯ ಪ್ರಕಾರವೇ ಎಲ್ಲಾ ನಡೆಯುತ್ತಿವೆ. ನನ್ನ ಹುಟ್ಟು, ಸಾವು ಎರಡೂ ನಡೆಯುವುದಕ್ಕೆ ಒಂದು ಕಾರಣವಿದೆ. ನಾನು ಅಶುಭ್ರವಾದ ಸ್ಥಳದಲ್ಲಿ ಸೆರೆಮನೆಯಲ್ಲಿ ತಾಯಿಪಕ್ಕದಲ್ಲಿ ತಂದೆ ಹೊರತು ಯಾರೂ ಇಲ್ಲದೆ ಹುಟ್ಟಬೇಕೆಂಬ ನಿರ್ಣಯವಿದೆ. ಆ ನಿರ್ಣಯದ ಪ್ರಕಾರವೇ ದೀನಸ್ಥಿತಿಯಲ್ಲಿ ಹುಟ್ಟಿದ್ದೇನೆ. ಹಾಗೆಯೇ ಮರಣವು ಕೂಡಾ ಒಂಟಿ ಸಮಯದಲ್ಲಿ, ಇತರನ ಆಯುಧದಿಂದ ಗಾಯಗೊಂಡಿರುವವನಾಗಿ ರಕ್ತವು ಸೋರಿ ಮರಣಿಸಬೇಕೆಂದು ನಿರ್ಣಯವಿದೆ. ಅದರ ಪ್ರಕಾರವೇ ಈಗ ಒಂಟಿಯಾಗಿರುವ ನನ್ನನ್ನು ನಿನ್ನ ಬಾಣ ಗಾಯಗೊಳಿಸಿದೆ. ಹುಟ್ಟು, ಸಾವು ಎರಡೂ ಹೀಗೇ ನಡೆಯಬೇಕೆಂದಿದೆ. ಆದಕಾರಣ ನೀನು ಬಾಧೆಪಡಬೇಡ"** ಎಂದಿದ್ದಾನೆ. ಆ ಮಾತುಗಳನ್ನು ಕೇಳಿದ ಬೇಟೆಗಾರ "ನೀವು ಎಷ್ಟೋ ಐಶ್ವರ್ಯ, ಬಲ ಎರಡೂ ಇರುವವರು. ನೀವು ಏನೂ ಇಲ್ಲದವರ ಹಾಗೆ ದೀನಸ್ಥಿತಿಯಲ್ಲಿ ಹುಟ್ಟುವುದು, ಹಾಗೆಯೇ ಒಬ್ಬಂಟಿಯಾಗಿ ಗಾಯಗೊಂಡು ಪಕ್ಕದಲ್ಲಿ ಯಾರೂ ಇಲ್ಲದೇ ಸಾಯುವುದು ನೀವು ನಿರ್ಣಯವೆಂದರೂ ನನಗೆ ಹೇಳಲಾರದ ಸಂಕಟವಾಗುತ್ತಿದೆ" ಎಂದಿದ್ದಾನೆ. ಹಾಗೆ ಸಂಕಟದಿಂದ ಮಾತನಾಡಿದ ಬೇಟೆಗಾರನನ್ನು ಸಮಾಧಾನ ಪಡಿಸುತ್ತಾ ಕೃಷ್ಣನು "ದೀನಸ್ಥಿತಿಯಲ್ಲಿ ಹುಟ್ಟಿರುವ ನನ್ನ ಜನನ, ಗಾಯಗೊಂಡು ಒಬ್ಬಂಟಿಯಾಗಿ ಮರಣಿಸುವ ನನ್ನ ಮರಣವು ಮುಂದಿನ ಪೀಳಿಗೆಗೆ ಅವಶ್ಯ. ಇಂದಿನಿಂದ ಕಲಿಯುಗವು ಪ್ರಾರಂಭವಾಗುತ್ತಿದೆ. ಕಲಿಯುಗದಲ್ಲಿ

ಇಲ್ಲಿಯವರೆಗು ಇಲ್ಲದ ಅಜ್ಞಾನವು ಪ್ರಾರಂಭವಾಗುವುದು. ಇಲ್ಲಿಯವರೆಗು ಇಲ್ಲದ ಮತಗಳು ಕಲಿಯುಗದಲ್ಲಿ ಹುಟ್ಟಿಬರುತ್ತವೆ. ಸೃಷ್ಠಿ ಆದಿಯಿಂದ ಪ್ರಪಂಚ ವ್ಯಾಪ್ತವಾಗಿರುವ ಇಂದೂ ಧರ್ಮಗಳು ಕ್ಷೀಣಿಸಿ, ಹೆಸರಿಗೆ ಮಾತ್ರ ಇಂದೂದೇಶದಲ್ಲಿಯೇ ಉಳಿದು ಅದೂ ಬಲಹೀನವಾಗಿ ಇವೆ. ಇಂದೂಗಳು ತಮ್ಮ ಧರ್ಮಗಳನ್ನು ತಾವೇ ತಿಳಿಯದೆ, ತಮ್ಮನ್ನು ತಾವು ಹಿಂದೂಗಳಾಗಿ ಹೇಳಿಕೊಳ್ಳುತ್ತಾರೆ. ಇಂದೂಪಥವನ್ನು (ಜ್ಞಾನಮಾರ್ಗವನ್ನು) ಹಿಂದೂಮತವಾಗಿ ಪ್ರಕಟಿಸಿಕೊಳ್ಳುತ್ತಾರೆ. 'ಪಥ' ಎಂಬ ಶಬ್ಧವು ಕೊನೆಗೆ 'ಮತ' ಎಂಬ ಪದವಾಗಿ ಬದಲಾಗಿಹೋಗುವುದು. **ಪಥ ಎಂದರೇ ಮಾರ್ಗ, ಮತ ಎಂದರೇ ಇಷ್ಟ** ಇದು ನನ್ನ ಮಾರ್ಗ ಎಂಬ ಅರ್ಥವನ್ನು ಬಿಟ್ಟು, ಇದು ನನ್ನ ಇಷ್ಟ ಎಂಬ ಮಾತನ್ನು ಹೇಳುತ್ತಾರೆ.

ಆದಿಯಿಂದ ಇಂದೂ ಧರ್ಮಗಳು ವಿಶ್ವವ್ಯಾಪ್ತವಾಗಿ 7ಇವೆ. ಕಲಿಯುಗದಲ್ಲಿ ಮತಗಳು ತಯಾರಾಗಿ ಇಂದೂಪಥದ ಒಂದು ಸ್ಥಾನವನ್ನು ಕ್ರೈಸ್ತ ಮತವು ಆಕ್ರಮಿಸಿಕೊಳ್ಳುವುದು. ಹಿಂದೂಗಳೆಲ್ಲರೂ ಒಬ್ಬೊಬ್ಬರಾಗಿ ಆ ಮತದಲ್ಲಿ ಸೇರಿಹೋಗುತ್ತಾ ಹಿಂದೂಮತವು ಕ್ಷೀಣಿಸಿ ಹೋಗುವುದು. ಅಂತಹ ಸಂದರ್ಭದಲ್ಲಿ ಹಿಂದೂಮತವನ್ನು ಕಾಪಾಡಿಕೊಳ್ಳುವುದಕ್ಕೆ ಕೆಲವು ಸಂಘಗಳು ಏರ್ಪಡುತ್ತವೆ. ಅಂತಹ ಹಿಂದೂ ಸಂಘಗಳಿಗೆ, ತಮ್ಮ ಮತಕ್ಕೆ ಸಂಬಂಧಿಸಿದ ಧರ್ಮಗಳು ತಿಳಿಯದೆ ಹೋಗಿರುವುದರಿಂದ, ಅವರಿಂದ ಹಿಂದೂ ಮತಕ್ಕೆ ನಷ್ಟ ಏರ್ಪಡುವುದು. ಜ್ಞಾನವಿಲ್ಲದ ಹಿಂದೂ ಸಂಘಗಳ ಕೆಲಸಗಳನ್ನು ನೋಡಿ ಹಿಂದೂಗಳೇ ದ್ವೇಷಿಸಿಕೊಳ್ಳುತ್ತಾರೆ. ಹಿಂದೂ ದೇಷದಲ್ಲಿ ಕೂಡಾ ಕ್ರೈಸ್ತ ಮತವು ಸಮೃದ್ಧಿಯಾಗಿ ವ್ಯಾಪಿಸಿ ಹೋಗುತ್ತದೆ. ಹಾಗೆ ಬೆಳೆದು ಹೋಗುತ್ತಿರುವ ಮತವನ್ನು ನೋಡಿ ಆ ಮತ ಪ್ರವಕ್ತನಿಗೆ ಪೂರ್ತಿ ವಿರುದ್ಧವಾಗಿ ಹಿಂದುಗಳು ತಯಾರಾಗುತ್ತಾರೆ. ತಮ್ಮ ಮತವನ್ನು ಹಿಂದೂಗಳು ಅವಹೇಳನೆ ಮಾಡುತ್ತಿದ್ದಾರೆಂದು ಹಿಂದೂಗಳ ಪ್ರವಕ್ತನಾದ ನನ್ನನ್ನು ಕುರಿತು ಕ್ರೈಸ್ತವಮತದವರು ಅಸೂಯೆಯಾಗಿ ವಿರುದ್ಧವಾಗಿ ಮಾತನಾಡುತ್ತಾರೆ. 'ನಮ್ಮ ದೇವರೇ ದೊಡ್ಡವನು,

నిమ్మ దేవరు కడిమె' ఎందు హిందూగళు హేళిదరే, "నమ్మ దేవరే దొడ్డవను" ఎందు క్రైస్తరు ఎన్నుత్తారె. క్రైస్త మత ప్రవక్తనాద యేసునన్ను నోడిదరూ, ఆతన హెసరన్ను కేళిదరూ హిందూగళు కెలవరు ఆక్రోశగొళ్ళుత్తారె. హాగెయే హిందూగళ దేవరన్ను, దేవతెగళన్ను క్రైస్తరు కడిమె భావనెయింద మాతనాడుత్తారె. హీగె నమ్మ దేవరు దొడ్డవనెందు క్రైస్తరు ఎందాగ, హిందూ సంఘదల్లినవరు కెలవరు నిమ్మ దేవరు దేవరే అల్లవెందు యేసునన్ను దూషిసుత్తిరుత్తారె. హిందూగళు క్రైస్త ప్రవక్తనాద యేసునన్ను దూషిసుత్తిద్దరే, క్రైస్తరు తమ్మ బైబల్‌నల్లిన వాక్యగళన్ను హేళుత్తా, అవర మతప్రచార మాడుత్తారె. జ్ఞానవన్ను బోధిసుత్తా నమ్మ మతదల్లి రక్షణె ఇదెయెందు హేళుత్తిరువుదరింద, దేవతెయ భక్తి హొరతు దేవర భక్తి హిందూమతదల్లి ఇల్లదిరువుదరింద, బహళజన హిందూగళు క్రైస్తరాగి బదలాగి హోగుత్తారె. కొనెగె హిందూగళు తమ్మ మతవన్ను రక్షిసికొళ్ళువ ప్రయత్నదల్లిరువాగ, క్రైస్తరు తమ్మ మతవన్ను బెళెసికొళ్ళువరు. పరమతవెందు హిందూగళు క్రైస్తమతవన్ను, అదర ప్రవక్తనన్ను దూషిసువాగ, క్రైస్తరు హిందూమత మాయె (సాతాన్) మతవెందు హిందూమతవన్ను, హిందూగళ దేవరుగళన్ను దూషిసుత్తారె. ఈ విధవాగి మతద్వేషగళు ఏర్పట్టు, అదరింద భూమిమేలె మతహింసెగళు ఏర్పడుత్తవె. భూమిమేలె మతగళిగాగి యుద్ధగళే బరుత్తవె. ఇవుగళెల్లవుగళిగె మనుష్య ఆచరిసతక్క ధర్మగళు యావువో, మనుష్య తిళిదుకొళ్ళబేకాద జ్ఞానవేనో, మతగళ హెసరుగళు ఇట్టుకొండ మనుష్యరిగె తిళియదె హోగిరువుదే ముఖ్యకారణ. ప్రతి మనుష్య హుట్టిదాగినింద యుక్తవయస్సినవరెగు జీవనోపాయక్కాగి ఓదికొండు, అదర నంతర ధనసంపాదనెయల్లి బిద్దు, ఉళిద కాలదల్లి మతవన్ను మతభక్తియన్ను, మత ప్రచారవన్ను మాడుత్తా నన్న మత దొడ్డదు,

ನನ್ನ ಮತ ದೊಡ್ಡದೆಂದು ದ್ವೇಷಗಳು ಬೆಳೆಸಿಕೊಳ್ಳುವರು. ಕ್ರೈಸ್ತರನ್ನು ನೋಡಿದರೇ ಹಿಂದೂಗಳು, ಹಿಂದೂಗಳನ್ನು ನೋಡಿದರೇ ಕ್ರೈಸ್ತರು ಒಬ್ಬರಿಗೊಬ್ಬರು ಅಜ್ಞಾನಿಗಳೆಂದುಕೊಳ್ಳುವ ಸ್ಥಿತಿ ಏರ್ಪಡುತ್ತದೆ. ಪ್ರತಿ ಮತದವನು ದೇವರ ಹೆಸರೇ ಹೇಳುತ್ತಾ, ದೇವರ ಬಳಿಗೇ ಸೇರಬೇಕೆಂದು ಹೇಳಿದರೂ ಅವರವರ ಪ್ರವಕ್ತರು, ಅವರವರ ಮತಗಳು ಬೇರೆಬೇರೆಯಾಗಿರುವುದರಿಂದ ಅವರವರ ದೇವರು ಕೂಡಾ ಬೇರೆಬೇರೆಯೆಂದು ಹೇಳುವ ಕಾಲಬರುತ್ತದೆ.

ಈ ವಿಧವಾಗಿ ಭೂಮಿಮೇಲೆ ಕಲಿಯುಗದಲ್ಲಿ ಮತಗಳ ಹೆಸರಿನಲ್ಲಿ ಅಧರ್ಮಗಳು ಬೆಳೆದುಹೋಗುವುದು. ಬೇರೆ ಮತಗಳಿಲ್ಲದ ದ್ವಾಪರಯುಗದಲ್ಲಿ ಒಂದು ಹಿಂದೂಗಳಿಗೆ ಸಂಬಂಧಿಸಿದ ಧರ್ಮಗಳನ್ನೇ ನಾನು ಹೇಳಿದ್ದೇನೆ. ನಾನು ಹೇಳಿರುವ ಧರ್ಮಗಳು ಸರ್ವಮಾನವರಿಗು, ಸರ್ವಮತಗಳಿಗು ಸಂಬಂಧಿಸಿರುವವೆಂದು ಯಾರಿಗೂ, ಯಾವ ಮತದವರಿಗೂ ತಿಳಿಯದೇ ಹೋಗುವುದರಿಂದ, ಕ್ರೈಸ್ತರು ನಮ್ಮ ಜ್ಞಾನವು, ನಮ್ಮ ಧರ್ಮಗಳು ಪ್ರತ್ಯೇಕವಾದವುಗಳೆಂದು, ನಮ್ಮ ಪ್ರವಕ್ತ ಹೇಳಿರುವವು ಕೃಷ್ಣನು ಹೇಳಿರುವವು ಬೇರೆಯೆಂದು ಅಂದುಕೊಳ್ಳುವರು. ದ್ವಾಪರ ಯುಗದಲ್ಲಿ ಕೃಷ್ಣನು ಹೇಳಿರುವ ಧರ್ಮಗಳನ್ನೇ ತಮ್ಮ ಪ್ರವಕ್ತ ಹೇಳಿದ್ದಾನೆಂದು ಯಾರೂ ಗುರುತಿಸಲಾರರು. ಇಂದೂ ಧರ್ಮಗಳನ್ನು ದೇವರು ಹೇಳಿದ್ದಾನೆಂದು, ಇಂದೂ ಧರ್ಮಗಳಿಲ್ಲದ ಮತವು ಭೂಮಿಮೇಲೆ ಇಲ್ಲವೆಂದು ಯಾರೂ ಗ್ರಹಿಸಲಾರರು. ಇಂದೂಧರ್ಮ ಗಳು ದೈವಜ್ಞಾನ ತಿಳಿದುಕೊಳ್ಳಬೇಕೆಂಬ ಪ್ರತಿ ಮತಸ್ಥನಿಗೂ ಅವಶ್ಯವಾದವುಗಳೇ. ಏಕೆಂದರೇ ಅವರ ಮತಗ್ರಂಥಗಳಲ್ಲಿ ಏನು ಹೇಳಿದ್ದಾರೋ ಅವುಗಳೇ ನಾನು ಹೇಳಿರುವ ಇಂದೂ ಧರ್ಮಗಳು, ಇಂದೂ ಎಂದರೇ ದೈವಜ್ಞಾನವೆಂದು ತಿಳಿಯದ ಪ್ರತಿ ಮತವು, ತಮ್ಮ ಮತಗಳಿಗೆ ಪ್ರತ್ಯೇಕವಾದ ಹೆಸರುಗಳು ಇಟ್ಟುಕೊಳ್ಳುತ್ತಾರೆ. ಕೊನೆಗೆ ದೈವಜ್ಞಾನವು (ಇಂದೂತ್ವವು) ತಿಳಿಯದ ಇಂದೂಗಳು ಕೂಡಾ ತಮ್ಮದು ಕೂಡಾ ಒಂದು ಮತವೆಂದು, ಅದರ ಹೆಸರನ್ನು ಹಿಂದೂ ಮತವೆಂದು ಹೇಳಿಕೊಳ್ಳುತ್ತಾರೆ. ನಾನು ಹೇಳಿರುವ ಧರ್ಮಗಳನ್ನು ತಿಳಿಯದೆ

ವೇದಗಳನ್ನು ಆಶ್ರಯಿಸಿ, ನಾವು ಹಿಂದೂಗಳೆಂದು ಕೆಲವರು ಹೇಳಿದರೇ, ಹಾಗೆಯೇ ನಾನು ಹೇಳಿರುವ ಧರ್ಮಗಳನ್ನೇ ತಮ್ಮ ಪ್ರವಕ್ತ ಹೇಳಿದ್ದಾನೆಂದು ತಿಳಿಯದೆ, ತಮ್ಮದು ಕ್ರೈಸ್ತ ಮತವೆಂದು ಕೆಲವರು ಹೇಳಿಕೊಳ್ಳುತ್ತಾರೆ. ನಾನು ಹೇಳಿರುವ ಧರ್ಮಗಳಲ್ಲಿ ಕೂಡಾ ಕೆಲವು ಅಧರ್ಮಗಳು ಬೆರೆತುಹೋಗಿ ಭಗವದ್ಗೀತೆಯಾಗಿ ನಿಮ್ಮ ಮುಂದೆ ನನ್ನ ಬೋಧನೆ ಇರುತ್ತದೆ. ನನ್ನ ಬೋಧನೆಯಾದ ಭಗವದ್ಗೀತೆಯಲ್ಲಿ ಕೂಡಾ ಆಧರ್ಮಗಳು ಬೆರೆತಿರುವುದರಿಂದ, ಅವುಗಳನ್ನೇ ಕೆಲವರು ಹಿಂದೂಗಳು ಆಶ್ರಯಿಸಿ, ನಾನು ಹೇಳಿರುವ ಧರ್ಮಗಳನ್ನು ಅರ್ಥಮಾಡಿಕೊಳ್ಳಲಾರರು. ಆ ವಿಧವಾಗಿ ಭಗವದ್ಗೀತೆ ಯಾರಿಗೂ ಅರ್ಥವಾಗದೇ ಹೋಗುತ್ತದೆ.

ಜಗತ್ತಿನಲ್ಲಿ ಅತಿದೊಡ್ಡ ಮತವಾಗಿ ಕ್ರೈಸ್ತಮತವು ಹೆಸರುಪಡೆದರೂ, ಆ ಮತಪ್ರವಕ್ತ ಹೇಳಿರುವ ಬೈಬಲ್ ಗ್ರಂಥದಲ್ಲಿ ಕೂಡಾ ಅಧರ್ಮಗಳು ಬೆರೆತುಹೋಗಿ ಕ್ರೈಸ್ತರು ಕೂಡಾ ದೈವಜ್ಞಾನವನ್ನು (ಇಂದೂತ್ವವನ್ನು) ತಿಳಿಯಲಾರರು. ಬೈಬಲನ್ನು ಓದಿದ ಪ್ರತಿ ಕ್ರೈಸ್ತನು, ಬೈಬಲನ್ನು ಬೋಧಿಸಿರುವ ಪ್ರತಿ ಬೋಧಕನು, ಅದರಲ್ಲಿರುವ ನನ್ನ ಧರ್ಮಗಳನ್ನು ತಿಳಿಯಲಾರರು. ಆದ್ದರಿಂದ ಕ್ರೈಸ್ತ ಪ್ರವಕ್ತನಾದ ಯೇಸು ಪ್ರಜೆಗಳನ್ನು ಉದ್ದೇಶಿಸಿ ಒಂದು ಮಾತು ಹೇಳಿ ಹೋಗುವನು. **ನಾನು ಹೇಳಿರುವ ಧರ್ಮಗಳು ನಿಮಗೆ ಈಗ ಅರ್ಥವಾಗುವುದಿಲ್ಲ. ನನ್ನ ನಂತರ ಸ್ವಲ್ಪ ಕಾಲಕ್ಕೆ ಒಬ್ಬ ವ್ಯಕ್ತಿ ಬಂದು ನಾನು ಹೇಳಿರುವ ನನ್ನ ಮಾತುಗಳನ್ನೇ ವಿವರವಾಗಿ ಹೇಳುವನು.** ಆಗ ನಾನು ಹೇಳಿರುವ ಮಾತುಗಳು ಅರ್ಥವಾಗುವುದೆಂದು ಹೇಳುವನು. ಯಾವ ವ್ಯಕ್ತಿಯಾದರೇ ಬೈಬಲ್ ವಾಕ್ಯಗಳನ್ನು ವಿವರಿಸಿ ಹೇಳುವನೋ, ಅದೇ ವ್ಯಕ್ತಿ ಭಗವದ್ಗೀತೆಯಲ್ಲಿ ಶ್ಲೋಕರೂಪದಲ್ಲಿರುವ ನನ್ನ ಧರ್ಮಗಳನ್ನು ಸಹ ವಿವರಿಸಿ ಹೇಳುವನು. ಅಲ್ಲಿಯವರೆಗು ಭಗವದ್ಗೀತೆಯಾಗಲೀ, ಬೈಬಲ್ಆಗಲೀ ಸರಿಯಾಗಿ ಯಾರಿಗೂ ಅರ್ಥವಾಗುವುದಿಲ್ಲ. ಇತ್ತ ಬೈಬಲನ್ನು ಅತ್ತ ಭಗವದ್ಗೀತೆಯನ್ನು ಏಕ ಕಾಲದಲ್ಲಿ ಹೇಳುವವನೇ ಎರಡು ಗ್ರಂಥಗಳಲ್ಲಿನ ಧರ್ಮಗಳು ಒಂದೇ ಎಂದು, ಆ

ಎರಡು ಗ್ರಂಥಗಳನ್ನು ಒಬ್ಬನೇ ಹೇಳಿದ್ದಾನೆಂದು ಸಂಚಲನೆ ಮಾತುಗಳನ್ನು ಹೇಳುವನು. ಎರಡು ಗ್ರಂಥಗಳಲ್ಲಿಯೂ ದೇವರು ಹೇಳಿರುವ ಧರ್ಮಗಳೊಂದಿಗೆ, ಮನುಷ್ಯರು ಬರೆದಿರುವ ಅಧರ್ಮಗಳು ಕೂಡಾ ಇವೆಯೆಂದು, ಅವುಗಳನ್ನು ಬಿಟ್ಟು ಧರ್ಮಗಳಿಗೆ ಮಾತ್ರವೇ ವಿವರವನ್ನು ಹೇಳುವನು. ಆ ವ್ಯಕ್ತಿ ಗುರುವಿನಂತಾಗಲಿ, ಸ್ವಾಮಿಯಂತಾಗಲಿ ಚಲಾವಣೆ ಆಗುವುದಿಲ್ಲ. ಯಾವ ಆಧಾರವಿಲ್ಲದ ಆತನನ್ನು ಗುರುತಿಸುವುದು ಬಹಳ ಕಷ್ಟವು ಎಂದು ಕೃಷ್ಣನು ಬೇಟೆಗಾರನಿಗೆ ಹೇಳಿದ್ದಾನೆ.

ಇಲ್ಲಿ ನಾವು ಆಲೋಚಿಸಬೇಕಾದ ವಿಷಯವೇನೆಂದರೇ ದೈವಧರ್ಮಗಳನ್ನು ಗೀತೆರೂಪದಲ್ಲಿ ದನಸ್ಸು, ಬಾಣಗಳನ್ನು ಧರಿಸಿದ ಅರ್ಜುನನಿಗೆ ಮಾತ್ರ ಹೇಳಿದ್ದಾನೆ. ಅಲ್ಲಿ ಕೃಷ್ಣನು ಅರ್ಜುನನು ಹೊರತು ಮೂರನೆಯ ವ್ಯಕ್ತಿ ಇಲ್ಲ. ಮೇಲಾಗಿ ಅರ್ಜುನನು ಧರ್ಮಗಳನ್ನು ಕುರಿತು ಕೇಳಲೂ ಇಲ್ಲ. ದಾರಿಯಲ್ಲಿ ಹೋಗುವವನಿಗೆ ಕರೆದು ಹೆಣ್ಣನ್ನು ಕೊಟ್ಟಹಾಗೆ, ಧರ್ಮಗಳ ಮೇಲೆ ಆಸಕ್ತಿಯಿಲ್ಲದ ಅರ್ಜುನನಿಗೆ ಧರ್ಮಗಳನ್ನು ಕುರಿತು ಕೃಷ್ಣನು ಹೇಳಿದ್ದಾನೆ. ಹಾಗೆಯೇ ಕಲಿಯುಗದಲ್ಲಿ ಮುಂಬರುವಂತಹ ಭವಿಷ್ಯತ್ತನ್ನು ಕುರಿತು, ಕ್ರೈಸ್ತ ಮತವನ್ನು ಕುರಿತು, ಹಿಂದೂಮತ ಕ್ಷೀಣಿಸಿ ಹೋಗುವುದನ್ನು ಕುರಿತು, ಧನಸ್ಸು ಬಾಣಗಳು ಧರಿಸಿರುವ ಬೇಟೆಗಾರನಿಗೆ ಹೇಳಿದ್ದಾನೆ. ಅರ್ಜುನನಿಗೆ ಗೀತಾ ಜ್ಞಾನವನ್ನು ಹೇಳಿದಂತೆ, ಭವಿಷ್ಯತ್ತನ್ನು ಕರಿತು ಕೇಳದಿದ್ದರೂ ಬೇಟೆಗಾರನಿಗೆ ಕಲಿಯುಗ ಆಧ್ಯಾತ್ಮಿಕ ಭವಿಷ್ಯತ್ತನ್ನು ಕುರಿತು ಹೇಳಿದ್ದಾನೆ. ಕಲಿಯುಗ ಆಧ್ಯಾತ್ಮಿಕ ಭವಿಷ್ಯತ್ತನ್ನು ಕುರಿತು ಹೇಳುವಾಗ ಅಲ್ಲಿ ಕೃಷ್ಣನು, ಬೇಟೆಗಾರ ಹೊರತು ಮೂರನೆಯ ವ್ಯಕ್ತಿ ಯಾರೂ ಇಲ್ಲ. ಯುದ್ಧರಂಗದಲ್ಲಿ ಗೀತೆಯನ್ನು ಕೃಷ್ಣನು ಅರ್ಜುನನಿಗೆ ಹೇಳಿದಾಗ, ನಂತರ ಅರ್ಜುನನು ವ್ಯಾಸನಿಗೆ ಹೇಳುವುದರಿಂದ ಗೀತೆ ಅರ್ಜುನನ ಮೂಲಕ ಹೊರಗೆಬಂದಿರುವುದೆಂದು ಹೇಳಬಹುದು. ಆದರೇ ಕಲಿಯುಗ ಆಧ್ಯಾತ್ಮಿಕ ಭವಿಷ್ಯತ್ತನ್ನು ಕೃಷ್ಣನು ಬೇಟೆಗಾರನಿಗೆ ಹೇಳಿದಾಗ ಅಲ್ಲಿ ಮೂರನೆಯ ವ್ಯಕ್ತಿ ಯಾರೂ ಇಲ್ಲ. ಹೇಳಿದ ಕೃಷ್ಣನು ಕೂಡಲೇ ಸತ್ತುಹೋದನು. ಇನ್ನು ಬೇಟೆಗಾರ

ಮಾತ್ರ ಉಳಿದಿದ್ದಾನೆ. ಕಲಿಯುಗ ಆಧ್ಯಾತ್ಮಿಕ ಭವಿಷ್ಯತ್ತು ಒಬ್ಬ ಬೇಟೆಗಾರನ ಮೂಲಕವೇ ಹೊರಗೆ ಬರಬೇಕು. ಆದರೇ ಬೇಟೆಗಾರನು ಸಹ ತಾನು ಮಾಡಿರುವ ತಪ್ಪಿಗೆ ಆಗಲೇ ನಿರಾಹಾರ ದೀಕ್ಷೆ ಮಾಡಿ ಅಲ್ಲಿ ಕೃಷ್ಣನ ಮುಂದೆಯೇ ಸತ್ತುಹೋದನೆಂದು ಬರೆದಿದ್ದಾರೆ. ಇಲ್ಲಿ ಪ್ರತ್ಯೇಕಿಸಿ ನಾನು ಕೇಳುವ ಪ್ರಶ್ನೆ ಏನೆಂದರೇ! ನಿನ್ನ ತಪ್ಪು ಏನೂ ಇಲ್ಲವೆಂದು, ಎಲ್ಲಾ ನನ್ನ ಕರ್ಮ ಪ್ರಕಾರ ನಡೆದಿದೆಯೆಂದು ಕೃಷ್ಣನು ಬೇಟೆಗಾರನೊಂದಿಗೆ ಹೇಳಿದರೂ, ಆತನು ಕೇಳಿಸಿಕೊಳ್ಳದೇ ನಾನು ಮಾಡಿದ ತಪ್ಪಿಗೆ ಶಿಕ್ಷೆ ಇರಬೇಕೆಂದು, ನಿರಾಹಾರದೀಕ್ಷೆ ಮಾಡಿ ತಕ್ಷಣವೆ ಸತ್ತುಹೋಗಿದ್ದಾನೆಂದು ನಂತರ ಕೃಷ್ಣನ ರಥಸಾರಥಿಯಾದ ದಾರಕನು ಅಲ್ಲಿಗೆ ಬಂದಿದ್ದಾನೆಂದು ಬರೆದಿದ್ದಾರೆ. ನಿರಾಹಾರದೀಕ್ಷೆ ಮಾಡಿ ಒಬ್ಬ ಮನುಷ್ಯ ಸತ್ತುಹೋಗಬೇಕೆಂದರೇ ಕನಿಷ್ಟ 40 ದಿನಗಳಾದರೂ ಬೇಕಾಗುತ್ತದೆ. ಅಂಥದರಲ್ಲಿ ನಿರಾಹಾರದೀಕ್ಷೆ ಮಾಡಿ ನಿಮಷಕ್ಕೇ ಸತ್ತುಹೋಗಿದ್ದಾನೆಂದು ಹೇಳುವುದು ಶುದ್ಧಸುಳ್ಳು ಅಲ್ಲವೇ?

ಭಾಗವತದಲ್ಲಿ ಕೃಷ್ಣನನ್ನು ಬಾಣದಿಂದ ಬೇಟೆಗಾರ ಹೊಡೆದಂತೆ ಬರೆದಿರುವವರು, ನಡೆದಿರುವ ಸಂಘಟನೆಯನ್ನು ನೋಡಿ ಕೃಷ್ಣನು ನಿವಾರಿಸಿದರೂ ಕೇಳದೇ, ನಿರಾಹಾರದೀಕ್ಷೆಯಿಂದ ಸತ್ತುಹೋಗಿದ್ದಾನೆಂದು ಬರೆದಿದ್ದಾರೆ. ಕೃಷ್ಣ ಬೇಟೆಗಾರ ಹೊರತು ಅಲ್ಲಿ ಯಾರೂ ಇಲ್ಲದ ಸಮಯದಲ್ಲಿ ಏನು ನಡೆದಿದೆಯೋ, ಏನು ಮಾತನಾಡಿದ್ದಾರೋ ಯಾರಿಗೂ ತಿಳಿದಿಲ್ಲ. ವಾಸ್ತವವಾಗಿ ಬೇಟೆಗಾರ ಸತ್ತುಹೋಗಲಿಲ್ಲ. ಬೇಟೆಗಾರ ಸಂಕಟಪಡುತ್ತಿರುವಾಗ ಕೃಷ್ಣನು ಎಲ್ಲಾ ಕರ್ಮ ಪ್ರಕಾರವೇ ನಡೆದಿದೆಯೆಂದು ಸಮಾಧಾನ ಪಡಿಸಿದ ನಂತರ ಕಲಿಯುಗ ಆಧ್ಯಾತ್ಮಿಕ ಭವಿಷ್ಯತ್ತನ್ನು ಕುರಿತು ಕೃಷ್ಣನು ಬೇಟೆಗಾರನಿಗೆ ಹೇಳಿ, ಈ ವಿಷಯವನ್ನು ನಾನು ನಿನಗೆ ಹೊರತು ಬೇರೆ ಯಾರಿಗೂ ಹೇಳಲಿಲ್ಲ ಎಂದಿದ್ದಾನೆ. ಕೃಷ್ಣನು ಹೇಳಿರುವ ಕೊನೆಯ ಸಂದೇಶವಾದ ಕಲಿಯುಗದಲ್ಲಿ ಆಧ್ಯಾತ್ಮಿಕ ಭವಿಷ್ಯತ್ತನ್ನು ಕೇಳಿದ ಬೇಟೆಗಾರ, ನಾನೆಷ್ಟೋ ಅದೃಷ್ಟವಂತನು ಎಂದು ಸಂತೋಷ ಪಟ್ಟಿದ್ದಾನೆ. ನನ್ನ ಜೀವನದ ಅಂತ್ಯ ಭಾಗದಲ್ಲಿ ನಾನು ಹೇಳುವ ದೊಡ್ಡ ರಹಸ್ಯವಿದು.

ಇದನ್ನು ನೀನು ಹೊರತು ಕೇಳಿದವನು ಯಾರೂ ಇಲ್ಲವೆಂದು ಕೃಷ್ಣನು ಹೇಳಿದ ಮಾತನ್ನು ಅನುಸರಿಸಿ ನಾನು ದೊಡ್ಡವನೆಂದು ಬೇಟೆಗಾರ ಅಂದುಕೊಂಡನು. ಯುದ್ಧರಂಗದಲ್ಲಿ ಕೃಷ್ಣನ ಮೂಲಕ ಗೀತೆಯನ್ನು ಕೇಳಿ, ಈ ರಹಸ್ಯ ನಿನಗೆ ಹೊರತು ಯಾರಿಗೂ ತಿಳಿಯದೆಂದು ಕೃಷ್ಣನು ಹೇಳಿದಾಗ, ಅರ್ಜುನನು ತನಗೆ ತಾನು ದೊಡ್ಡದಾಗಿ ಊಹಿಸಿಕೊಂಡತೆ ಕೃಷ್ಣನು ಹೇಳಿರುವ ಕಲಿಯುಗ ಆಧ್ಯಾತ್ಮಿಕ ಭವಿಷ್ಯತ್ತು, ದೈವಜ್ಞಾನ ರಹಸ್ಯವನ್ನು ಕೇಳಿದ ಬೇಟೆಗಾರನು ಸಹ ಅರ್ಜುನನು ಅಂದುಕೊಂಡಹಾಗೆ ಅಂದುಕೊಂಡನು. ಆ ಕಾಲದಲ್ಲಿ ಯುದ್ಧ ಮುಗಿದುಹೋದ ನಂತರ ಅರ್ಜುನನು ವ್ಯಾಸನಿಗೆ ಹೇಳಿದಾಗ, ಅದು ವ್ಯಾಸನ ಮೂಲಕ ಎಲ್ಲರಿಗೂ ತಿಳಿದಿದೆ. ಕೃಷ್ಣನು ಹೇಳಿರುವ ಗೀತೆಯನ್ನು ಅರ್ಜುನನು ವ್ಯಾಸನಿಗೆ ಹೇಳಿದಂತೆ, ಭಾರತದಲ್ಲಾಗಲೀ, ಭಾಗವತದಲ್ಲಾಗಲೀ ಬರೆಯಲಿಲ್ಲ. ಆದರೂ ಹೀಗೆಯೇ ನಡೆದಿದೆ, ಅರ್ಜುನನೇ ಸ್ವತಃವಾಗಿ ವ್ಯಾಸನಿಗೆ ಹೇಳಿದ್ದಾ ನೆಂದು ನಾವು ಹೇಳಿದ್ದೇವೆ. ಇಲ್ಲಿ ಬೇಟೆಗಾರನಿಗೆ ಕೃಷ್ಣನು ಹೇಳಿದ ವಿಷಯವು ಕೂಡಾ ಭಾರತ, ಭಾಗವತಗಳಲ್ಲಿ ಬರೆಯಲಿಲ್ಲ. ಆದರೂ ಈ ವಿಧವಾಗಿ ನಡೆದಿದೆಯೆಂದು ನಾವು ಹೇಳುತ್ತಿದ್ದೇವೆ. ಈ ನನ್ನ ಮಾತು ಕೇಳಿದ ಕೆಲವರು ಪಂಡಿತರು, ಕವಿಗಳು ಈತನು ಯಾರು? ಸ್ವತಃವಾಗಿ ಹೀಗೆಯೇ ನಡೆದಿದೆಯೆಂದು ಹೇಳುವುದಕ್ಕೆ? ಎಂದು ಕೇಳಬಹುದು. ಇದಕ್ಕೆ ಉತ್ತರವನ್ನು ನಂತರ ಹೇಳುವೆವು, ಆದರೇ ಈ ಪ್ರಶ್ನೆಯಲ್ಲಿ ಈತ ಯಾರು? ಎಂಬ ಪ್ರಶ್ನೆ ನನಗೆ ಚೆನ್ನಾಗಿ ಇಷ್ಟವಾಗಿದೆ.

ನಾನು ಸತ್ಯವನ್ನು ಹೇಳಿದರೇ ವಿಶ್ವಾಸಿಸದವರು ನಿರಾಹಾರದೀಕ್ಷೆಯಿಂದ ಬೇಟೆಗಾರ ಸತ್ತುಹೋಗಿದ್ದಾನೆ ಎಂದಾಗ, ನಿರಾಹಾರದೀಕ್ಷೆಗೆ ನಿಮಿಷಗಳಲ್ಲಿ ಯಾರೂ ಸತ್ತುಹೋಗುವುದಿಲ್ಲ ಅಲ್ಲವೇ! ಎಂದು ಯಾಕೆ ಕೇಳಲಾರದೆ ಹೋಗಿದ್ದಾರೆ? ಕೃಷ್ಣನು ರಕ್ತಸ್ರಾವದಿಂದ ಸತ್ತುಹೋಗಿದ್ದಾನೆಂದು ಸತ್ಯವನ್ನು ನಾವು ಹೇಳಿದರೇ ನಂಬಲಾರದವರು, ಕೃಷ್ಣನು ರಥವನ್ನೇರಿ ವೈಕುಂಠಕ್ಕೆ ಹೋಗಿದ್ದಾನೆ ಎಂದು ಭಾಗವತದಲ್ಲಿ ಬರೆದಿರುವ ಮಾತನ್ನು ಹೇಗೆ

ನಂಬಿದ್ದಾರೆಂದು ಕೇಳುತ್ತಿದ್ದೇವೆ. ನಿರಾಹಾರದೀಕ್ಷೆಯಿಂದ ನಿಮಿಷಗಳ ಅವಧಿಯಲ್ಲಿ ಸತ್ತುಹೋಗುತ್ತಾನೆಂಬ ಮಾತಾಗಲೀ, ಕೃಷ್ಣನು ರಥದಮೇಲೆ ವೈಕುಂಠಕ್ಕೆ ಹೋಗಿದ್ದಾನೆನ್ನುವುದಾಗಲೀ ಪೂರ್ತಿ ಅಶಾಸ್ತ್ರೀಯ, ಅಸತ್ಯ. ಕಲ್ಪಿತ ಪುರಾಣಗಳನ್ನು ಕುರುಡರಾಗಿ ನಂಬುವವರು ಆಧಾರಪೂರಿತ ವಿಷಯಗಳನ್ನು ಯಾಕೆ ನಂಬುವುದಿಲ್ಲವೆಂದು ನಾವು ಕೇಳುತ್ತಿದ್ದೇವೆ. ಕೃಷ್ಣನು ಬೇಟೆಗಾರನಿಗೆ ಇನ್ನೂ ಕೆಲವು ವಿಷಯಗಳನ್ನು ಹೇಳಿದ್ದಾನೆ. ಆ ವಿಷಯಗಳು ಕ್ರೈಸ್ತ, ಹಿಂದೂಮತಗಳಿಗೆ ಎರಡಕ್ಕೂ ಕಣ್ತೆರೆಸುವಂತಹ ವಿಷಯಗಳಾಗಿ ಇವೆ. ಕೃಷ್ಣನು ದೇವರ ಧರ್ಮಗಳನ್ನು ತಿಳಿಸುವುದಕ್ಕೆ ಅವತರಿಸಿ ಬಂದಿದ್ದಾನೆ. ದ್ವಾಪರ ಯುಗ ಅಂತ್ಯದಲ್ಲಿ ದೈವಧರ್ಮಗಳನ್ನು ಭಾರತ ದೇಶದಲ್ಲಿ ತಿಳಿಸಿದ್ದಾನೆ. ಹಾಗೆಯೇ ಕಲಿಯುಗ ಪ್ರಥಮದಲ್ಲಿಯೇ ಬಂದು ಮತ್ತೊಂದುಬಾರಿ ಧರ್ಮಗಳನ್ನು ಇತರ ದೇಶದಲ್ಲಿ ತಿಳಿಸುತ್ತೇನೆಂದು ಹೇಳಿದ್ದಾನೆ. ಇಜ್ರಾಯೇಲ್ ದೇಶದಲ್ಲಿ ಯೇಸುವಾಗಿ ಉದ್ಭವಿಸಿ ಧರ್ಮಗಳನ್ನು ಹೇಳಿ ಹೋಗುತ್ತೇನೆಂದು, ಅವಶ್ಯವನ್ನನುಸರಿಸಿ ನಂತರ ಸಹ ಬರುತ್ತೇನೆಂದು ಹೇಳಿದ್ದಾನೆ. ಬೇಟೆಗಾರನನ್ನು ಅಡ್ಡ ಇಟ್ಟುಕೊಂಡು ಹೇಳಿರುವ ಮಾತುಗಳು ಇಂದಿಗೂ ಸತ್ಯಗಳಾಗಿ ಕಾಣಿಸುತ್ತಿವೆ. ಇನ್ನೂ ಆತನು ಹೇಳಿರುವ ಮಾತುಗಳು ಹೀಗಿವೆ. "ಕೃಷ್ಣನಾಗಿ ಬಂದಿರುವ ನಾನು ಕಲಿಯುಗ ಪ್ರಥಮಾಂಕದಲ್ಲಿಯೇ ಯೇಸುವಾಗಿ ಬರುತ್ತೇನೆ. ಹಾಗೆ ಬಂದಿರುವ ನನ್ನನ್ನು ಯಾರೂ ಗುರುತಿಸಲಾರರು. ಈಗ ಹೇಳಿರುವ **ಗೀತೆ**ಯಾಗಲೀ, ಆಗ ಹೇಳುವ **ವಾರ್ತೆ**(ಸುವಾರ್ತೆ)ಯಾಗಲೀ ಎರಡು ನನ್ನ ಧರ್ಮಗಳನ್ನೇ ತಿಳಿಸುತ್ತವೆ. ಎಲ್ಲಿಯು ಯಾವ ವಾಕ್ಯವು ಬೇಧ ಹೊಂದಿರುವುದಿಲ್ಲ. ನಾನೇ ಯೇಸು, ಯೇಸುವೇ ನಾನಾಗಿದ್ದರೂ ಶರೀರಗಳು, ಹೆಸರುಗಳು ಬೇರೆಯಾದರೂ **ಇಬ್ಬರು ಒಬ್ಬರೇ** ಎಂದು ಯಾರಿಗೂ ತಿಳಿದಿಲ್ಲ. ನನ್ನ ಬೋಧನೆ, ಏಸು ಬೋಧನೆ ಎರಡೂ ಒಂದೇ ಆಗಿದ್ದರೂ, ಗ್ರಂಥಗಳು ಅವುಗಳ ಹೆಸರುಗಳು ಬೇರೆಬೇರೆಯಾಗಿದ್ದರೂ, ಎರಡೂ ಒಂದೇ ಎಂದು ಯಾರೂ ಗುರುತಿಸಲಾರರು. ಅಷ್ಟೇ ಅಲ್ಲದೇ ನಾನು ಹೇಳಿರುವ ಗೀತೆ, ಯೇಸು ಹೇಳಿರುವ ನಾಲ್ಕು ಸುವಾರ್ತೆಗಳು ಪುನಃ ವಿವರವಾಗಿ ಮತ್ತೊಬ್ಬ ವ್ಯಕ್ತಿ ಹೇಳುವವರೆಗು ಯಾರಿಗೂ ಅರ್ಥವಾಗುವುದಿಲ್ಲ.

ಆ ವ್ಯಕ್ತಿಯನ್ನು ಕುರಿತು ಯೇಸು ಹೇಳಿರುವ ವಾರ್ತೆಗಳಲ್ಲಿ ಆದರಣಕರ್ತ ಎಂದು ಬರೆಯಲ್ಪಟ್ಟಿರುತ್ತದೆ. ಯೇಸು ಹೇಳಿರುವ **"ಆದರಣಕರ್ತ"** ಎಂಬ ಹೆಸರಿನಲ್ಲಿನ ಮೊದಲ ಅಕ್ಷರ, ಕೊನೆಯ ಅಕ್ಷರ ಎರಡು ಅಕ್ಷರಗಳು ಮೊದಲನೆಯದು ಮೊದಲಿನಲ್ಲಿ, ಕೊನೆಯದು ಕೊನೆಯಲ್ಲಿ ಇರುವ ಹೆಸರು ಆತನಿಗಿರುತ್ತದೆ. ಆ.....ರ್ತ ಎಂಬ ಎರಡಕ್ಷರಗಳ ಹೆಸರು ಹೊಂದಿರುವವನೇ ನಾನು ಹೇಳಿರುವ ಬೋಧನೆಯನ್ನು, ಹಾಗೆಯೇ ಯೇಸು ಹೇಳಿರುವ ವಾರ್ತೆಗಳನ್ನು ಏಕ ಕಾಲದಲ್ಲಿ ವಿವರಿಸಿ ಹೇಳುವನು. ಹಾಗೆ ಹೇಳುವವನೇ ಕಾಲಜ್ಞಾನವನ್ನು ಹೇಳಿರುವ ವೀರಬ್ರಹ್ಮಯ್ಯನವರಿಗು, ಸರ್ವ ಮಾನವರಿಗು ಗುರುವಾಗುತ್ತಾನೆ.

ಯೇಸುಪ್ರಭುವನ್ನು ವಿಶ್ವಾಸಿಸಿದವನು ನನ್ನನ್ನು (ಕೃಷ್ಣನನ್ನು) ವಿಶ್ವಾಸಿಸುವುದಿಲ್ಲ. ಹಾಗೆಯೇ ಗೀತೆಯನ್ನು ಓದಿದವನು ಯೇಸುನನ್ನು ವಿಶ್ವಾಸಿಸುವುದಿಲ್ಲ. ಇತ್ತ ನಾನು ಅತ್ತ ಯೇಸು ಉತ್ತರ ದಕ್ಷಿಣ ಧೃವಗಳಹಾಗೆ ಕಾಣಿಸುತ್ತಿರುವುದರಿಂದ ಹಿಂದೂಗಳು ಕ್ರೈಸ್ತರನ್ನು, ಕ್ರೈಸ್ತರು ಹಿಂದೂಗಳನ್ನು ದ್ವೇಷಿಸಿಕೊಳ್ಳುವ ಸ್ಥಿತಿಯಲ್ಲಿ ಇರುತ್ತಾರೆ. ಆ ಸಮಯದಲ್ಲಿ ಯೇಸು ಹೇಳಿರುವ ಆದರಣಕರ್ತ ಹೊರತು ಯಾರೂ ಎರಡು ಮತಗಳಿಗೆ ಸಮಾಧಾನಗಳನ್ನು ಹೇಳಲಾರರು. ಹಾಗೆಯೇ ಸಮನ್ವಯ ಪಡಿಸಲಾರರು. ಕ್ರೈಸ್ತರಲ್ಲಿ ಆದರಣಕರ್ತ, ಹಿಂದೂಗಳಲ್ಲಿ ಆ.....ರ್ತ ಆದವನು ಒಬ್ಬನೇ. ಆ ಒಬ್ಬನೇ ಎರಡು ಮತಗಳಲ್ಲಿನ ಯೇಸು ಹೇಳಿರುವ ವಾಕ್ಯಗಳಿಗು, ನಾನು ಹೇಳಿರುವ ಗೀತೆಗು ಸರಿಯಾದ ಭಾವವನ್ನು ಹೇಳಿ, ಎರಡು ಬೋಧನೆಗಳನ್ನು ಒಂದಾಗಿಯೇ ತೋರಿಸುವನು. ಎರಡು ಮತಗಳಲ್ಲಿ ಹೇಳಿರುವ ನನ್ನನ್ನು, ಯೇಸುನನ್ನು ಒಬ್ಬನಾಗಿಯೇ ತೋರಿಸುವನು. ನಾನು ಮೂರು ಸಾವಿರ ವರ್ಷಗಳ ನಂತರ ಹುಟ್ಟಿ, ಈ ಜನ್ಮದಲ್ಲಿ ಹೇಳಿರುವುದು ಪುನಃ ಆಗ ಹೇಳಬಲ್ಲೆನು. ಹಾಗೆ ಹೇಳಿರುವ ನಾನೇ, ಯೇಸು ಹೆಸರಿನೊಂದಿಗೆ ಸ್ವಲ್ಪಕಾಲವಿದ್ದು ಹೋಗಬಲ್ಲೆನು. ನಂತರ ಸ್ವಲ್ಪಕಾಲಕ್ಕೆ ಬಂದವನೇ ಎರಡು ಜನ್ಮಗಳಲ್ಲಿ ಇರುವುದು ನಾನೇ ಎಂದು, ಹೇಳಿರುವುದು

ನಾನೇ ಎಂದು ತಿಳಿಸುವನು. ಹಾಗೆ ಹೇಳುವುದರಿಂದ ಆತನು ಇತ್ತ ಹಿಂದೂಗಳಿಗು, ಅತ್ತ ಕ್ರೈಸ್ತರಿಗು ವಿರೋಧಿಯಾಗಿ ಕಾಣಿಸುವನು. ಸಮಾಜದಲ್ಲಿ ಎಷ್ಟು ವಿರುದ್ಧತೆ ಬಂದರೂ ನನ್ನ ಕೆಲಸ ಇದೇ ಎನ್ನುವಂತೆ ಆತನು ಮಾತ್ರ ಯಾರಿಗೂ ಜಗ್ಗದೆ ತಾನು ಹೇಳಬೇಕಾಗಿರುವುದು ಹೇಳಿ ಹೋಗುವನು. ಎರಡು ಬೋಧನೆಗಳನ್ನು ವಿವರಿಸಿ ಹೇಳುವವನು ಪ್ರತ್ಯೇಕಿಸಿ ಎರಡು ಮತಗಳಲ್ಲಿ ಇತ್ತ ನಾನು, ಅತ್ತ ಯೇಸು ಹೇಳದೆ ಬಿಟ್ಟುಹಾಕಿರುವ ಬೋಧನೆಗಳನ್ನು ತಿಳಿಸುವನು. ಅಷ್ಟೇ ಅಲ್ಲದೇ ಆದಿಯಿಂದ ತಿಳಿಯದ ಆಧ್ಯಾತ್ಮಿಕ ರಹಸ್ಯಗಳನ್ನು ತಿಳಿಸಿ, ಆತನ ಪ್ರತ್ಯೇಕತೆ ಏನೋ ಇತರರಿಗೆ ಅರ್ಥವಾಗುವಂತೆ ಮಾಡಿದರೂ, ಆತನನ್ನು ಯಾರೂ ಗುರುತಿಸಲಾರರು. ಮಾನವನಿಗೆ ಬೇಕಾಗಿರುವ ಜ್ಞಾನವನ್ನು ನಾನು ಒಂದು ವಿಧಾನದಿಂದ ಹೇಳಿದರೇ, ಯೇಸು ಅದನ್ನೇ ಮತ್ತೊಂದು ವಿಧವಾಗಿ ಹೇಳಿದರೇ, ಎರಡೂ ಒಂದೇ ಎಂದು ಹೇಳಿರುವ ಆದರಣಕರ್ತ, ಎರಡನ್ನೂ ವಿವರಿಸಿ ಹೇಳುತ್ತಾ, ಎರಡರಲ್ಲಿ ಇರುವುದನ್ನೇ ತನ್ನ ವಿಧಾನದೊಂದಿಗೆ ಹೇಳಿ ಪೂರ್ಣಗೊಳಿಸುವನು" ಎಂದು ಹೇಳಿದ್ದಾನೆ. ಕೃಷ್ಣನು ಹೇಳಿರುವ ವಿಧಾನವನ್ನು ನೋಡಿದರೇ ಬರುವ ಮೂರನೆಯವನು ಹೇಗಿರುತ್ತಾನೋ ಸ್ವಲ್ಪ ಅರ್ಥವಾಗುತ್ತದೆ.

ಮನುಷ್ಯ ಬದುಕುವುದಕ್ಕೆ ಆಹಾರ ತಿನ್ನಬೇಕು. ಆಹಾರದಲ್ಲಿ ನಾವು ಅನ್ನವನ್ನು ತಿನ್ನುತ್ತಿದ್ದೇವೆ. ಅನ್ನವನ್ನು ಒಂದನ್ನೇ ತಿಂದರೂ ಹಸಿವು ತೀರುವುದು. ಆದರೇ ಅನ್ನದೊಳಗೆ ಸಾಂಬಾರನ್ನು ಬೆರೆಸಿಕೊಂಡು ತಿಂದರೆ ರುಚಿಯಾಗಿರುತ್ತದೆ. ಅನ್ನಕ್ಕೆ ಸಾಂಬಾರನ್ನು ಬೆರೆಸಿಕೊಂಡು ತಿಂದು ಹಸಿವು ತೀರಿಸಿಕೊಳ್ಳುವವರು ಬಹಳಜನ ಇದ್ದರೂ, ಸ್ವಲ್ಪಜನ ಅನ್ನವನ್ನು ಸಾಂಬಾರಿನೊಂದಿಗೆ ತಿಂದ ನಂತರ ಕೊನೆಯಲ್ಲಿ ಮಜ್ಜಿಗೆಯೊಂದಿಗೆ ತಿನ್ನುತ್ತಾರೆ. ಹಾಗೆ ಮಜ್ಜಿಗೆಯೊಂದಿಗೆ ತಿಂದರೇ ಪೂರ್ತಿ ತೃಪ್ತಿಯಾಗಿ ತಿಂದಂತಾಗುವುದು. ಈ ವಿಧವಾಗಿ ಆಹಾರವನ್ನು ಮೂರುಭಾಗಗಳಾಗಿ ಹೇಳಿಕೊಳ್ಳಬಹುದು. ಒಂದು ಅನ್ನ, ಎರಡು ಸಾಂಬಾರು, ಮೂರು ಮಜ್ಜಿಗೆ. ಈ ಮೂರನ್ನು ಸಂಪೂರ್ಣವಾದ ಆಹಾರವೆಂದು

ಹೇಳಬಹುದು. ಅನ್ನವನ್ನು, ಸಾಂಬಾರನ್ನು, ಮಜ್ಜಿಗೆಯನ್ನು ಮೂರನ್ನು ತಿಂದವನು ಸಂಪೂರ್ಣ ಆರೋಗ್ಯದಿಂದ ಇರುತ್ತಾನೆ. ಮೂರು ಆಹಾರ ಭಾಗಗಳಲ್ಲಿಯು ಪೋಷಕ ಪದಾರ್ಥಗಳು ಸಂಪೂರ್ಣವಾಗಿ ಇರುವುದರಿಂದ ಮೂರು ಭಾಗಗಳ ಆಹಾರವನ್ನು ತಿಂದವನು ಶರೀರದಲ್ಲಿ ತೃಪ್ತಿಯಾಗಿ ಆರೋಗ್ಯದಿಂದ ಜೀವಿಸುತ್ತಾನೆ. ಅನ್ನ, ಸಾಂಬಾರು ಮಜ್ಜಿಗೆಯನ್ನು ಕುರಿತು ಈಗ ಹೇಳಿಕೊಳ್ಳಬೇಕಾದ ಅವಶ್ಯವೇನು ಬಂದಿದೆಯೆಂದು ಕೆಲವರು ಕೇಳಬಹುದು. ಇದನ್ನು ಉಪಮಾನವಾಗಿ ಹೇಳುತ್ತಿದ್ದೇವೆ. ದ್ವಾಪರ ಯುಗದಲ್ಲಿ ಕೃಷ್ಣನು ಗೀತೆಯನ್ನು ಹೇಳಿದ್ದಾನೆ. ಗೀತೆಯನ್ನು ಆಧಾರ ಮಾಡಿಕೊಂಡು ಮುಂದಕ್ಕೆ ಹೋಗುವವರಿದ್ದರೂ, ಕಲಿಯುಗದಲ್ಲಿ ಯೇಸು ಕೂಡಾ ಜ್ಞಾನವನ್ನು ಹೇಳಿದ್ದಾನೆ. ಯೇಸು ಹೇಳಿರುವ ಜ್ಞಾನವನ್ನು ಆಧಾರ ಮಾಡಿಕೊಂಡು ಹೋಗುವವರು ಕೂಡಾ ಎಷ್ಟೋ ಜನರಿದ್ದಾರೆ. ಈ ಎರಡು ಜ್ಞಾನಗಳನ್ನು ಆಹಾರದಲ್ಲಿನ ಎರಡು ಭಾಗಗಳಾಗಿ ಹೋಲಿಸಿ ನೋಡಿಕೊಳ್ಳೋಣ. ಕೃಷ್ಣನು ಹೇಳಿರುವ ಗೀತಾ ಜ್ಞಾನವನ್ನು ಆಹಾರದಲ್ಲಿ ಒಂದನೆಯದಾದ ಅನ್ನಕ್ಕೆ ಹೋಲಿಸಿಕೊಳ್ಳೋಣ. ಅನ್ನವು ಆಹಾರದಲ್ಲಿ ಮೂಲ ಪದಾರ್ಥದಂಥದ್ದು. ಅನ್ನವು ಒಂದೇ ಬಣ್ಣಹೊಂದಿದ್ದು, ಒಂದೇ ರುಚಿ ಹೊಂದಿರುತ್ತದೆ. ಅನ್ನ ಒಂದನ್ನೇ ತಿನ್ನಬೇಕೆಂದರೇ ಸ್ವಲ್ಪಕಷ್ಟವಾಗಿರುತ್ತದೆ. ಅನ್ನವನ್ನು ಒಂದನ್ನೇ ಹೊಟ್ಟೆ ತುಂಬಾ ತಿನ್ನಬಹುದು. ಹಾಗೆಯೇ ಅನ್ನವನ್ನು ಒಂದನ್ನೇ ಹೊಟ್ಟೆತುಂಬಾ ತಿಂದರೂ ಮನುಷ್ಯ ಬದುಕಬಹುದು. ಆದರೇ ತಿನ್ನುವ ಆಹಾರ ರುಚಿಯಾಗಿ ಇರುವುದಕ್ಕೆ, ದೇವರು ಕೃಷ್ಣನನ್ನು ಕಳುಹಿಸಿ **ಗೀತಾಜ್ಞಾನ**ವನ್ನು ಹೇಳಿಸಿದಂತೆ, ಯೇಸುನನ್ನು ಕಳುಹಿಸಿ **ವಾರ್ತಾಜ್ಞಾನ**ವನ್ನು ಹೇಳಿಸುವನು. ಯೇಸು ಹೇಳಿರುವ ವಾರ್ತಾ ಜ್ಞಾನವು ಅನ್ನದೊಂದಿಗೆ ಸಹ ಅನ್ನ ಬೆರೆಸಿಕೊಂಡು ತಿನ್ನುವ ಸಾಂಬಾರಿನಂಥದ್ದು. ಅನ್ನದ ರುಚಿ ಬೇರೆ, ಸಾಂಬಾರಿನ ರುಚಿ ಬೇರೆಯಾದರೂ ಎರಡೂ ಮನುಷ್ಯನಿಗೆ ಅವಶ್ಯವಾದ ಆಹಾರ ಪದಾರ್ಥಗಳೇ. ಯೇಸು ಹೇಳಿರುವ ಜ್ಞಾನವನ್ನು, ಕೃಷ್ಣನು ಹೇಳಿರುವ ಜ್ಞಾನವನ್ನು ಅರ್ಥಮಾಡಿಕೊಂಡರೇ, ಅನ್ನವನ್ನು ಬಡಿಸಿದ ವ್ಯಕ್ತಿ, ಸಾಂಬಾರನ್ನು ಬಡಿಸಿದ ವ್ಯಕ್ತಿ ಬೇರೆಬೇರೆಯಾದರೂ, ಅನ್ನ ಸಾಂಬಾರು

ಬೇರೆಬೇರೆಯಾದರೂ ಎರಡೂ ತಿನ್ನುವ ಪದಾರ್ಥಗಳೇ ಎಂದು ತಿಳಿದುಕೊಂಡರೇ, ಎರಡು ಪದಾರ್ಥಗಳನ್ನು ಬೆರೆಸಿಕೊಂಡು ತಿಂದವನು ಹೊಂದುವ ರುಚಿಯಹಾಗೆ, ಗೀತಾ ಜ್ಞಾನವನ್ನು, ವಾರ್ತಾ ಜ್ಞಾನವನ್ನು ಎರಡನ್ನೂ ಸಮಾನವಾಗಿ ಅರ್ಥ ಮಾಡಿಕೊಂಡರೇ, ಎಷ್ಟೋ ಅಭಿರುಚಿ ತೃಪ್ತಿ ಏರ್ಪಡುತ್ತದೆ. ಹಾಗಲ್ಲದೇ ಅನ್ನ ಬೆಳ್ಳಗಿದೆ, ಸಾಂಬಾರು ಕಪ್ಪಾಗಿದೆ ಎಂದು ಅದು ಬೇರೆ ಇದು ಬೇರೆ ನಾನು ಅನ್ನವೊಂದನ್ನು ಮಾತ್ರ ತಿನ್ನುತ್ತೇನೆಂದು, ಅನ್ನವನ್ನು ಮಾತ್ರ ತಿಂದರೂ ಹೊಟ್ಟೆ ತುಂಬುವುದು. ಹಾಗೆಯೇ ಸಾಂಬಾರನ್ನು ಮಾತ್ರ ತಿನ್ನುತ್ತೇನೆಂದು ಸಾಂಬಾರೊಂದನ್ನೇ ತಿಂದರೂ ಹೊಟ್ಟೆ ತುಂಬುವುದು. ಹಾಗೆ ತಿನ್ನುವುದರಲ್ಲಿರುವ ರುಚಿ ಬೇರೆಯಾಗಿರುತ್ತದೆ. ಎರಡನ್ನೂ ಬೆರೆಸಿಕೊಂಡು ತಿನ್ನುವುದರಿಂದ ರುಚಿ ಬೇರೆಯಾಗಿದ್ದು ಚೆನ್ನಾಗಿರುತ್ತದೆ.

ಈಗ ಭೂಮಿಮೇಲೆ ನಾವು ಅನ್ನವನ್ನು ಮಾತ್ರ ತಿನ್ನುತ್ತೇವೆನ್ನುವಂತೆ ಕೃಷ್ಣನೊಂದರ ಗೀತಾಜ್ಞಾನವನ್ನು ಮಾತ್ರ ಓದಿರುವ ಹಿಂದೂಗಳೆನ್ನುವವರು ಕೆಲವರಿದ್ದಾರೆ. ಹಾಗೆಯೇ ನಾವು ಸಾಂಬಾರನ್ನು ಮಾತ್ರ ತಿನ್ನುತ್ತೇವೆನ್ನುವಂತೆ ಯೇಸು ಒಂದರ ವಾರ್ತಾಜ್ಞಾನವನ್ನು ಮಾತ್ರ ಓದಿರುವ ಕ್ರೈಸ್ತರು ಎಷ್ಟೋ ಜನರಿದ್ದಾರೆ. ಇಂತಹ ಸಮಯದಲ್ಲಿ ಅನ್ನ ಸಾಂಬಾರು ಎರಡರ ವಿಷಯ ತಿಳಿದಿರುವ ಆದರಣಕರ್ತ ಬಂದು ಎರಡರ ವಿವರವನ್ನು ವಿವರಿಸಿ ಎರಡನ್ನೂ ಬೆರೆಸಿಕೊಳ್ಳಿರೆನ್ನುವಂತೆ ಗೀತೆಯಲ್ಲಿನ ಜ್ಞಾನವನ್ನು, ವಾರ್ತೆಗಳಲ್ಲಿನ ಜ್ಞಾನವನ್ನು ವಿವರಿಸಿ ಹೇಳುವನು. ಅಲ್ಲಿಯವರೆಗು ಕೃಷ್ಣನು ಬೇರೆ, ಯೇಸು ಬೇರೆಯೆಂದು ಹಾಗೆಯೇ ಗೀತಾಜ್ಞಾನವು ಬೇರೆ, ವಾರ್ತಾಜ್ಞಾನವು ಬೇರೆಯೆಂದು ಅಂದುಕೊಳ್ಳುತ್ತಿರುತ್ತಾರೆ. ಭೂಮಿಮೇಲೆ ಕ್ರೈಸ್ತ ಪಾಸ್ಟರ್, ಫಾದರ್‌ಗಳೆನ್ನುವ ಬೋಧಕರಿಗೂ, ಹಿಂದೂ ಗುರುಗಳೆನ್ನುವ ಬೋಧಕರಿಗೂ ವಿಭಿನ್ನವಾಗಿ ಅಲ್ಲಿಯವರೆಗು ಎರಡರಲ್ಲಿ ಯಾರಿಗೂ ತಿಳಿಯದ ವಿವರವನ್ನು ಆದರಣಕರ್ತ ಬೋಧಿಸಿದಾಗ, ವಿವರವನ್ನು ತಿಳಿದಿರುವುದಕ್ಕೆ ಕೆಲವರು ಮಾತ್ರ ಸಂತೋಷಪಡುತ್ತಾರೆ. ಬಹಳಜನ ಬೋಧಕರು ಅತನನ್ನು ವಿರೋಧಿಸುತ್ತಾರೆ.

ಆತನ ಮೇಲೆ ದಾಳಿಗಳು ಸಹ ಮಾಡುತ್ತಾರೆ. ಆದರೂ ಆತನು ಯಾರಿಗೂ ಭಯಪಡದೇ ತನ್ನ ಕೆಲಸವನ್ನು ತಾನು ಮಾಡುವನೆಂದು ಕೃಷ್ಣನು ಸಹ ಹೇಳಿದ್ದಾನೆ. ಎರಡಕ್ಕೂ ಸಮನ್ವಯಕರ್ತನಾದ ಆತನನ್ನು ಯೇಸು ಆದರಣಕರ್ತ ಎಂದು ಹೇಳಿದರೇ, ಆತನ ಜನ್ಮ ಹಿಂದೂಮತದಲ್ಲಿ ಇರುವುದರಿಂದ ಮತ್ತು ಆತನು ಎರಡು ಮತಗಳಿಗೆ ಆದರ್ಶವಾಗಿ ಇರುವುದರಿಂದ, ಯೇಸು ಹೇಳಿರುವ ಆದರಣಕರ್ತ, ಹಿಂದೂಗಳಲ್ಲಿ **"ಆದರ್ಶಕರ್ತ"** ಎಂಬ ಹೆಸರಿನಿಂದ ಚಲಾವಣೆ ಆಗುವನೆಂದು ಕೃಷ್ಣನು ಬೇಟೆಗಾರನಿಗೆ ಹೇಳಿ ಹೋಗಿದ್ದಾನೆ. ಕೃಷ್ಣನು ಹೇಳಿರುವ ಆದರ್ಶಕರ್ತ, ಯೇಸು ಹೇಳಿರುವ ಆದರಣಕರ್ತ ಇಬ್ಬರೂ ಒಬ್ಬರೇ ಎಂದು ತಿಳಿದುಹೋಗಿದೆ. ಆದರಣಕರ್ತನಾದ ಆದರ್ಶಕರ್ತ ಎಂಬ ಹೆಸರು ಯಾರಿಗಿದೆಯೋ ಹುಡುಕಿದರೆ ಆ ಹೆಸರನ್ನು ಅನುಸರಿಸಿ ಸುಲಭವಾಗಿ ಮೂರನೆಯ ವ್ಯಕ್ತಿಯನ್ನು ಗುರುತಿಸಬಲ್ಲೆವು. ಆ ಹೆಸರಿರುವವನು ಬಂದು ಹೋಗಿದ್ದಾನಾ, ಅಥವಾ ಬಂದಿದ್ದಾನಾ, ಅಥವಾ ಭವಿಷ್ಯತ್ತಿನಲ್ಲಿ ಬರುತ್ತಾನಾ? ಎಂಬ ವಿಷಯವು ಮಾತ್ರ ಅರ್ಥವಾಗದ ವಿಷಯ.

'ಆದರ್ಶಕರ್ತ' ಎಂಬ ಹೆಸರಿರುವವನು ಅದರಣಕರ್ತನಾಗಿ ಇತ್ತ ಯೇಸು, ಆಕಡೆ ಕೃಷ್ಣನ ಜ್ಞಾನವನ್ನು ವಿವರಿಸಿ ಹೇಳುವುದೇ ಅಲ್ಲದೇ, ಇನ್ನೂ ಅರ್ಥವಾಗದೇ ಉಳಿದಿರುವ ಧರ್ಮಗಳನ್ನು ಎಂದರೇ ಇನ್ನೂ ತಿಳಿಯದಿರುವ ಧರ್ಮಗಳನ್ನು ಹೊಸ ವಿಧಾನದಲ್ಲಿ ತಿಳಿಸಿ ಪೂರ್ಣಗೊಳಿಸುವನೆಂದು ಕೃಷ್ಣನು ಹೇಳಿ ಹೋಗಿದ್ದಾನೆ ಅಲ್ಲವೇ! ಆತನು ಪೂರ್ಣಗೊಳಿಸುವ ಧರ್ಮಗಳನ್ನು ಹೇಗೆ ಹೋಲಿಸಬಹುದೋ ವಿವರಿಸಿಕೊಳ್ಳೋಣ. ಮನುಷ್ಯನಿಗೆ ಸಂತೃಪ್ತಿಕೊಡುವ ಪೂರ್ಣ ಭೋಜನ ಮೂರು ಭಾಗಗಳಾಗಿ ಇರುತ್ತದೆಂದು, ಆ ಮೂರು ಭಾಗಗಳನ್ನು ಅನ್ನ, ಸಾಂಬಾರು, ಮಜ್ಜಿಗೆ (ಮೊಸರು) ಎಂದು ಹೇಳಿಕೊಂಡಿದ್ದೇವೆ. ಅನ್ನವನ್ನು ರುಚಿಕರವಾದ ಸಾಂಬಾರಿನೊಂದಿಗೆ ತಿಂದರೂ, ಕೊನೆಯಲ್ಲಿ ಮಜ್ಜಿಗೆಯಿಂದ ತಿಂದರೇನೇ ತೃಪ್ತಿಯಾಗಿರುತ್ತದೆ, ಪೂರ್ತಿ ಊಟ ಭೋಜನ ಆದಂತಿರುತ್ತದೆ. ಹಾಗೆಯೇ ಮುಂಬರುವ ಆದರ್ಶಕರ್ತ, ಕೃಷ್ಣನು ಗೀತೆಯನ್ನು

ಹೇಳಿದಾಗ ಅದರಲ್ಲಿ ಕೂಡಾ ತಿಳಿಯದೆ ಇರುವುದು ಯಾವುದಾದರೇ ಇದೆಯೋ, ಹಾಗೆಯೇ ಯೇಸು ತನ್ನ ವಾರ್ತೆಯನ್ನು ಹೇಳಿದಾಗ ಅಲ್ಲಿಯೂ ಸಹ ತಿಳಿಯದಿರುವುದು ಯಾವುದಾದರೆ ಇದೆಯೋ, ಎರಡು ಕಡೆಗಳಲ್ಲಿ ತಿಳಿಯದೆ ಉಳಿದಿರುವುದನ್ನು ಪೂರ್ತಿಯಾಗಿ ತಿಳಿಸುವನು. ದೇವರ ಧರ್ಮಗಳ ವಿಷಯದಲ್ಲಿ ಯಾರಬಳಿ ಪ್ರಶ್ನೆ ಎನ್ನುವುದಾಗಲೀ, ಸಂಶಯವೆನ್ನುವುದಾಗಲೀ ಇಲ್ಲದಂತೆ ಮಾಡುವನು. ಇದನ್ನು ಅನುಸರಿಸಿ ಆದರ್ಶಕರ್ತ ಎಂಬ ಹೆಸರಿನಿಂದ ಬರುವವನು ನಾಸ್ತಿಕರ ಬಳಿಯಾಗಲೀ, ಹೇತುವಾದಿಗಳ ಬಳಿಯಾಗಲೀ ದೇವರನ್ನು ಕುರಿತು ಕೇಳುವ ಪ್ರಶ್ನೆಯೇ ಇಲ್ಲದಂತೆ ಮಾಡುವನು. ಆದ್ದರಿಂದ ಆದರ್ಶಕರ್ತ ಇತ್ತ ನಾಸ್ತಿಕರಿಗೆ, ಅತ್ತ ಆಸ್ತಿಕರಿಗೆ ತಿಳಿಯದ ಜ್ಞಾನ ವಿಧಾನವನ್ನು ತಿಳಿಸುವನೆಂದು ಅರ್ಥವಾಗುತ್ತಿದೆ. ದ್ವಾಪರಯುಗದಲ್ಲಿ ಕೃಷ್ಣನು ಮರಣಿಸುವಾಗ ಹೇಳಿರುವ ಆದರ್ಶಕರ್ತ, ಕಲಿಯುಗದಲ್ಲಿ ಯೇಸು ಬೋಧಿಸುತ್ತಾ ಹೇಳಿರುವ ಆದರಣಕರ್ತ, ಎಷ್ಟೋ ದೊಡ್ಡ ಜ್ಞಾನವನ್ನು ಹೊಂದಿ ಕ್ರೈಸ್ತರಿಗು, ಹಿಂದೂಗಳಿಗು ಜೀರ್ಣಿಸಿಕೊಳ್ಳಲಾಗದ ಆಹಾರದಂತೆ ಇದ್ದಾನೆ. ಆದರಣಕರ್ತ, ಆದರ್ಶಕರ್ತ ಆದವನು ಹೇಳಿರುವ ಬೋಧನೆಯನ್ನು ಗ್ರಹಿಸಿರುವ ಹಿಂದೂಗಳು, ಕ್ರೈಸ್ತರು ಆತನಲ್ಲಿಯೇ ಕೃಷ್ಣನನ್ನು, ಆತನಲ್ಲಿಯೇ ಯೇಸುನನ್ನು ನೋಡಿಕೊಳ್ಳುತ್ತಾರೆ. ನಾನು ಈಗ ಹೇಳಿರುವ ವಿಷಯಗಳು ಹಿಂದೂಮತ ಪ್ರಚಾರಕ್ಕಾಗಿಯೋ, ಅಥವಾ ಕ್ರೈಸ್ತವ ಮತ ಪ್ರಚಾರಕ್ಕಗಿಯೋ ಅಲ್ಲ. ಎರಡು ಮತಗಳಿಗೆ ಅತೀತವಾದ ದೇವರನ್ನು ಕುರಿತು ತಿಳಿಸುವ ವಿಧಾನವೆಂದು ತಿಳಿಯಬೇಕು. ಅಷ್ಟೇ ಅಲ್ಲದೇ ಕೃಷ್ಣನು ಹೋಗುತ್ತಾ ಹೋಗುತ್ತಾ ಕೊನೆಯದಾಗಿ ಹೇಳಿರುವ ಕಲಿಯುಗ ಆಧ್ಯಾತ್ಮಿಕ ಭವಿಷ್ಯತ್ತಿನಲ್ಲಿ ಆದರ್ಶಕರ್ತ ಹೆಸರಿರುವುದು ವಿಶೇಷ. ಈ ದಿನ ಭೂಮಿಮೇಲಿರುವ ಜ್ಞಾನವನ್ನು ಕುರಿತು, ಅಜ್ಞಾನವನ್ನು ಕುರಿತು, ಹುಟ್ಟಿ ಬಂದಿರುವ ಮತಗಳನ್ನು ಕುರಿತು ಕೃಷ್ಣನು ಆದಿನವೇ ಹೇಳಿದ್ದಾನೆ. ಇದೆಲ್ಲವೂ ಕೃಷ್ಣನು ಕೊನೆಯ ದಿನದಂದು ಹೇಳಿರುವ ಭವಿಷ್ಯತ್ತಿನ ವಿವರವೆಂದು ತಿಳಿಯಬೇಕು.

ಈಗ ಒಂದು ಪ್ರಶ್ನೆ ಬಾರದೇ ಇರುವುದಿಲ್ಲ. ಅದೇನೆಂದರೇ! ಕೃಷ್ಣನು ಯುದ್ಧ ರಂಗದಲ್ಲಿ ಬೋಧನೆ ಹೇಳುವಾಗ ಕೇಳಿಸಿಕೊಂಡ ಅರ್ಜುನನು ನಂತರ ವ್ಯಾಸನಿಗೆ ಹೇಳಿದ್ದಾನೆಂದು, ವ್ಯಾಸನ ಮೂಲಕ ಎಲ್ಲರಿಗೂ ತಿಳಿದಿದೆ ಎಂದು ಹೇಳಿದ್ದೀರ. ಅದನ್ನು ಒಂದು ವಿಧವಾಗಿ ಸತ್ಯವೆಂದೇ ಒಪ್ಪಿಕೊಳ್ಳಬಹುದು. ಆದರೇ ಕೃಷ್ಣನು ಮರಣಿಸುವ ಕೊನೆಯ ಸಮಯದಲ್ಲಿ ಕಲಿಯುಗ ಆಧ್ಯಾತ್ಮಿಕವನ್ನು ಕುರಿತು ಹೇಳಿದ್ದಾನೆಂದು, ಅದನ್ನು ಬೇಟೆಗಾರ ಕೇಳಿಸಿಕೊಂಡಿದ್ದಾನೆಂದು ಹೇಳಿದ್ದೀರ. ಅಲ್ಲಿ ಯಾರೂ ಇಲ್ಲದ ಆ ಸಮಯದಲ್ಲಿ ಕೃಷ್ಣನು ಹೇಳಿರುವ ಸಮಾಚಾರವನ್ನು ಕೇಳಿಸಿಕೊಂಡ ಬೇಟೆಗಾರ ಆ ವಿಷಯವನ್ನು ನಂತರ ಯಾರಿಗೂ ಹೇಳಿದಂತೆ ಸುಳಿವಿಲ್ಲ. ಬೇಟೆಗಾರ ಹೇಳಿದಂತೆ ಎಲ್ಲಿಯೂ ಇಲ್ಲದಿರುವಾಗ ಅಲ್ಲಿ ನಡೆದ ವಿಷಯವು ನಿಮಗೆ ಹೇಗೆ ತಿಳಿದಿದೆ? ನೀವು ಹೇಗೆ ಈ ವಿಷಯಗಳೆಲ್ಲವನ್ನೂ ಹೇಳುತ್ತಿದ್ದೀರೆಂದು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೇ! ಅರ್ಜುನನು ಗೀತೆಯನ್ನು ವ್ಯಾಸನಿಗೆ ಹೇಳಿದಂತೆ ಕೂಡಾ ಭಾರತದಲ್ಲಾಗಲೀ, ಭಾಗವತದಲ್ಲಾಗಲೀ ಇಲ್ಲ. ಅಲ್ಲಿ ವ್ಯಾಸನು ಬುದ್ಧಿವಂತಿಕೆಯಿಂದ ಪ್ರವರ್ತಿಸಿ, ಅರ್ಜುನನು ಹೇಳಿದ್ದನ್ನು ತಿಳಿಯದಂತೆ ಮಾಡಿ, ಸಂಜಯನು ಧೃತರಾಷ್ಟ್ರನಿಗೆ ಹೇಳಿದಂತೆ ವರ್ಣಿಸಿದ್ದಾನೆ. ಹೇಗಾದರೇ ಏನು, ಕೊನೆಗೆ ಕೃಷ್ಣನು ಅರ್ಜುನನಿಗೆ ಹೇಳಿದ ವಿಷಯವು ಹೊರಗೆ ಬಂದಿದೆ. ಆದರೇ ಇಲ್ಲಿ ಭಾಗವತದಲ್ಲಿ ಬಾಣದಿಂದ ಹೊಡೆದ ಬೇಟೆಗಾರನ ಪಾತ್ರವನ್ನು ಕೊಂದುಹಾಕಿ ಬೇಟೆಗಾರನನ್ನು ಪೂರ್ತಿಯಾಗಿ ಇಲ್ಲದಂತೆ ಮಾಡಿದ್ದಾರೆ. ಆದ್ದರಿಂದ ಕೃಷ್ಣನು ಹೇಳಿದ ವಿಷಯವು ಪ್ರಸ್ತಾವನೆಗೇ ಬರಲಿಲ್ಲ, ನಂತರ ಯಾರಿಗೂ ತಿಳಿಯದೇ ಹೋಗಿದೆ. ಆ ಬೇಟೆಗಾರ ತನಗೆ ಕಲಿಯುಗ ಆಧ್ಯಾತ್ಮಿಕ ಭವಿಷ್ಯತ್ತು ತಿಳಿದರೂ, ಆ ವಿಷಯವನ್ನು ಯಾರಿಗೂ ಹೇಳಬೇಕೆಂದುಕೊಳ್ಳಲಿಲ್ಲ. ತನಗೆ ಪರಿಚಯವಿರುವವರೆಲ್ಲಾ ನಿತ್ಯವು ಬೇಟೆಗೆ ಹೋಗಿ ಬದುಕುವವರೇ, ಆದಕಾರಣ ಅವರಿಗೆ ಈ ವಿಷಯವು ಅವಶ್ಯವಿಲ್ಲವೆಂದುಕೊಂಡಿದ್ದಾನೆ. ಯಾರಿಗಾದರೂ ಹೇಳಬೇಕೆಂದುಕೊಂಡರೂ ಇವನಿಗೆ ಹೇಳುವುದಕ್ಕೇ ಸಾಧ್ಯವಾಗಲಿಲ್ಲ. ಈ ವಿಧವಾಗಿ ಆ ವಿಷಯವು ಅವನೊಂದಿಗೆ ಇಲ್ಲದಂತೆ

ಹೋಯಿತು. ಹಾಗೆ ಅವನು ಆ ಜನ್ಮದಲ್ಲಿ ಮರಣಹೊಂದಿ ನಂತರ ಜನ್ಮದಲ್ಲಿ ಹುಟ್ಟುತ್ತಾ ಬಂದು ಅಂದಿನಿಂದ ಇಂದಿನವರೆಗು ಎಷ್ಟೋ ಜನ್ಮಗಳೆತ್ತಿದ್ದಾನೆ. ಆ ವಿಧವಾಗಿ ಆ ಜೀವಿಯು ಜನ್ಮಿಸುತ್ತಾ, ಮರಣಿಸುತ್ತಾ ಎಷ್ಟೋ ಜನ್ಮಗಳನ್ನು ಧರಿಸಿದರೂ ಆತನ ಹಿಂದೆ ಆತ್ಮ ಬರುತ್ತಲೇ ಇರುತ್ತದೆ. ಆ ಜೀವಿಯು ಎಷ್ಟು ಜನ್ಮಗಳು ಬದಲಾದರೂ ಅವನೊಂದಿಗೆ ಶಾಶ್ವತವಾಗಿ ಇರುವ ಆತ್ಮ ಕೂಡಾ ಅವನ ಹಿಂದೆಯೇ ಇದ್ದೂ ಎಲ್ಲಾ ಜನ್ಮಗಳಿಗೆ ಸಾಕ್ಷಿಯಾಗಿರುತ್ತದೆ. ಹಿಂದಿನ ಜನ್ಮ ವಿಷಯವು ಕೂಡಾ ಜೀವಿಗೆ ತಿಳಿಯುವುದಿಲ್ಲ. ಆದರೇ ಆದಿಯಿಂದ ಎಲ್ಲ ಜನ್ಮಗಳಿಗೆ ಸಾಕ್ಷಿಯಾಗಿರುವ ಆತ್ಮಗೆ ಎಲ್ಲ ಜನ್ಮಗಳ ವಿಷಯವು ತಿಳಿಯುವುದು. ದ್ವಾಪರಯುಗ ಅಂತ್ಯದಲ್ಲಿ ಕೊನೆಯಾಗಿ ಬೇಟೆಗಾರನಿಗೆ ಹೇಳಿರುವ ವಿಷಯವೆಲ್ಲಾ ಆತನ ಆತ್ಮಗೆ ತಿಳಿದಿದೆ. ಆತನು ಈಗ ಪ್ರಸ್ತುತ ಜನ್ಮದಲ್ಲಿ ಒಂದು ರೋಗದಿಂದ ಬಳಲುತ್ತಾ ನನ್ನಬಳಿಗೆ ಬರುವುದು ನಡೆದಿದೆ. ಆಗ ನಾನು ಆತನಿಗೆ ಕರ್ಮವನ್ನು ಉದಾಹರಸಿವುದಕ್ಕೆ ದೈವಜ್ಞಾನವನ್ನು ಹೇಳುವ ಸಮಯದಲ್ಲಿ, ಆ ಜೀವಿಯು ನಿದ್ರಾವಸ್ಥೆಯೊಳಗೆ ಹೋಗಿ ಒಳಗಿರುವ ಆತ್ಮವೇ ಕೇಳುವುದಕ್ಕೆ ಆರಂಭಿಸಿತು. ನಾನು ಕೃಷ್ಣನನ್ನು ಕುರಿತು ಆತನು ಹೇಳಿರುವ ಜ್ಞಾನವನ್ನು ಕುರಿತು ಹೇಳುವ ಸಮಯದಲ್ಲಿ, ಆತನಲ್ಲಿನ ಆತ್ಮ ಕೃಷ್ಣನ ಮರಣಸಮಯದಲ್ಲಿ ನಡೆದ ವೃತ್ತಾಂತವೆಲ್ಲವನ್ನು ವಿವರವಾಗಿ ನನಗೆ ಹೇಳಿತು. ಆದಕಾರಣ ಅದನ್ನೇ ನಾನು ನಿಮಗೆ ಹೇಳಿದ್ದೇನೆ.

ಇದೇನೋ ಕಾಗೆ ಗುಬ್ಬಚ್ಚಿ ಕಥೆಯಂಥದ್ದೆಂದು ಅಂದುಕೊಳ್ಳಬೇಡಿ. ಮನುಷ್ಯನಿಗೆ ಜನ್ಮಗಳಿರುವುದು ವಾಸ್ತವ, ಪುನರ್ಜನ್ಮದಲ್ಲಿ ಜ್ಞಾಪಕವು ಅಪರೂಪವಾಗಿ ಯಾರಿಗಾದರೂ ಬರಬಹುದು. ಹಾಗೆ ಬಂದಿರುವ ಸಂಘಟನೆಗಳು ಕೂಡಾ ಎಷ್ಟೋಇವೆ. ನಡೆದುಹೋಗಿರುವ ಜನ್ಮಗಳಲ್ಲಿನ ವಿಷಯಗಳು ಜ್ಞಾಪಕ ಬರುವುದಕ್ಕೆ ಒಂದೇ ಒಂದು ಆತ್ಮವೇ ಕಾರಣ. ಜೀವಿಗಾಗಲೀ, ಮನಸ್ಸಿಗಾಗಲೀ, ಬುದ್ಧಿಗಾಗಲೀ ಗತಜನ್ಮ ಜ್ಞಾಪಕಗಳು ಇರುವುದಿಲ್ಲ. ವಿಷಯಗಳನ್ನು ಜ್ಞಾಪಕ ಇಟ್ಟುಕೊಳ್ಳುವ ಸಾಮರ್ಥ್ಯ ಶರೀರದಲ್ಲಿನ

ಮನಸ್ಸಿಗೆ ಮಾತ್ರವಿರುತ್ತದೆ. ಮನಸ್ಸು ಸತ್ತುಹೋದ ಜನ್ಮದಲ್ಲಿಯೇ ಹೋಗುತ್ತದೆ. ನಂತರ ಜನ್ಮದಲ್ಲಿ ಹೊಸ ಮನಸ್ಸು ಬರುತ್ತದೆ. ಆದಕಾರಣ ಪ್ರಸ್ತುತ ಜನ್ಮದಲ್ಲಿ ಗತಜನ್ಮ ಜ್ಞಾಪಕಗಳು ಪ್ರಸ್ತುತವಿರುವ ಮನಸ್ಸಿಗೆ ತಿಳಿಯುವುದಿಲ್ಲ. ಮನಸ್ಸಿನ ನಂತರ ಜ್ಞಾಪಕವನ್ನು ಉಂಟುಮಾಡುವುದು ಆತ್ಮ. ಒಬ್ಬ ಮನುಷ್ಯ ನಿದ್ರೆಮಾಡುವ ಸಮಯದಲ್ಲಿ ಮನಸ್ಸು ಹೊರಗಿನ ಅವಯವಗಳ ಸಂಬಂಧ ಕಳೆದುಕೊಂಡು, ಬ್ರಹ್ಮನಾಡಿಯಲ್ಲಿ ಅಡಗಿರುತ್ತದೆ. ಆಗ ಆ ಶರೀರದಲ್ಲಿನ ಆತ್ಮ ಮನಸ್ಸಿನ ಹಾಗೆ ಕೆಲಸಮಾಡಿ ಯಾರಾದರೂ ಕರೆದರೇ, ಆ ಕರೆಯನ್ನು ಬುದ್ಧಿಗೆ ಜೀವಿಗೆ ಸೇರಿಸಿ ನಿದ್ರೆಯಿಂದ ಏಳುವಂತೆ ಮಾಡುತ್ತಿದೆ. ಅಷ್ಟೇಅಲ್ಲದೇ ಆತ್ಮ ಶರೀರದಲ್ಲಿ ರಾತ್ರಿಹಗಲು ಎಲ್ಲ ವಿಷಯಗಳಿಗು ಸಾಕ್ಷಿಯಾಗಿದೆ. ಒಬ್ಬ ಮನುಷ್ಯ ಎಷ್ಟು ಜನ್ಮಗಳೆತ್ತಿದರೂ ಅವನನ್ನು ಬಿಡದಂತೆ ಇರುವುದು ಆತ್ಮ ಒಂದೇ. ಆದಿನ ಕೃಷ್ಣ ಸತ್ತುಹೋದಾಗ ಬೇಟೆಗಾರನ ಶರೀರದಲ್ಲಿ ಜೀವಿಯೊಂದಿಗೆ ಸಹ ಇರುವ ಆತ್ಮ, ಕೃಷ್ಣನ ಮರಣ ಸಮಯದಲ್ಲಿ ಏನು ನಡೆದಿದೆ, ಏನು ಸಂಭಾಷಣೆ ನಡೆದಿದೆ ಎಲ್ಲವನ್ನೂ ನೋಡಿದೆ. ಇದು ಸರ್ವ ಮಾನವರಲ್ಲಿ ನಡೆಯುವ ಪ್ರಕ್ರಿಯೆ. ಆದರೇ ಯಾರಿಗೂ ಶರೀರದೊಳಗೆ ನಡೆಯುವ ಕಾರ್ಯವು ತಿಳಿದಿಲ್ಲ. ಬೇಟೆಗಾರನ ಶರೀರದಲ್ಲಿನ ಆತ್ಮ ನನಗೆ ತಿಳಿಸುವುದು ಕೆಲವರಿಗೆ ವಿಚಿತ್ರವಾಗಿ ಕಾಣಿಸಿದರೂ, ಇದು ವಾಸ್ತವವಾಗಿ ಕೆಲವು ಸಂದರ್ಭಗಳಲ್ಲಿ ನಡೆಯುವುದೇ. ಕೃಷ್ಣನ ಮರಣಕ್ಕೆ ಆತ್ಮ ಸಾಕ್ಷಿ ಆಗಿರುವುದರಿಂದ ಅಂದಿನ ವಿಷಯವು ಪ್ರಸ್ತುತ ಜನ್ಮದಿಂದ, ಪ್ರಸ್ತುತ ವ್ಯಕ್ತಿಯಿಂದ ಹೇಳುವುದು ನಡೆದಿದೆ. ಇಲ್ಲಿ ಇನ್ನೊಂದು ವಿಶೇಷ ಕೂಡಾ ಇದೆ. ಅದೇನೆಂದರೇ! ದ್ವಾಪರಯುಗದಲ್ಲಿ ಕೃಷ್ಣನ ಮರಣ ಸಮಯದಲ್ಲಿರುವ ಅಂದಿನ ಬೇಟೆಗಾರ ಅಂದಿನಿಂದ ಎಷ್ಟೋ ಜನ್ಮಗಳನ್ನು ಧರಿಸುತ್ತಾ ಬಂದು, ಕೊನೆಗೆ ಪ್ರಸ್ತುತ ಜನ್ಮದಲ್ಲಿ ನನ್ನ ಮುಂದೆ ಬರುವುದು ನಡೆದಿದೆ. ಹಾಗೆ ನನ್ನ ಮುಂದಕ್ಕೆ ಬಂದಿರುವ ಪ್ರಸ್ತುತ ವ್ಯಕ್ತಿ ಕ್ರೈಸ್ತ ಮತಕ್ಕೆ ಸೇರಿದವನು. ಅಂದಿನ ಹಿಂದೂಮತದಲ್ಲಿನ ಬೇಟೆಗಾರ ಇಂದಿನ ಕ್ರೈಸ್ತ ಮತದಲ್ಲಿನ ವ್ಯಕ್ತಿಯೆಂದು ತಿಳಿಯುತ್ತಿದೆ.

ಇಂದಿನ ಕ್ರೈಸ್ತನು ಅಂದಿನ ವಿಷಯವನ್ನು ಹೇಳುವುದೇನು? ಎಂದು ಆಶ್ಚರ್ಯ ಪಡಬೇಕಾದ ಅವಶ್ಯವಿಲ್ಲ. ಮನುಷ್ಯ ಬದುಕಿರುವವರೆಗೇ ಮತ, ಸತ್ತುಹೋದ ನಂತರ ಯಾರು ಯಾವ ಮತದಲ್ಲಾದರೂ ಕರ್ಮಪ್ರಕಾರ ಹುಟ್ಟಬಹುದು. ಗತ ಜನ್ಮದಲ್ಲಿನ ಕ್ರೈಸ್ತರು ಈ ಜನ್ಮದಲ್ಲಿ ಹಿಂದೂಗಳಾಗಿ ಹುಟ್ಟಬಹುದು. ಈ ಜನ್ಮದಲ್ಲಿನ ಹಿಂದೂಗಳು ಮುಂಬರುವ ಜನ್ಮದಲ್ಲಿ ಕ್ರೈಸ್ತರಾಗಿ ಹುಟ್ಟಬಹುದು. ಒಬ್ಬ ಮನುಷ್ಯ ಯಾವ ಮತದಲ್ಲಿ ಮನುಗಡೆ ಸಾಗಿಸಬೇಕೊ ಅವನ ಕರ್ಮವೇ ನಿರ್ಣಯಿಸುತ್ತದೆ. ಅದರ ಪ್ರಕಾರವೇ ಕೆಲವರು ಹಿಂದೂಗಳಾಗಿ, ಕೆಲವರು ಕ್ರೈಸ್ತರಾಗಿ ಹುಟ್ಟುತ್ತಿದ್ದಾರೆ. **ಯಾರಿಗಾದರೂ ಜನ್ಮದಿಂದ ಬಂದ ಮತವು ದೇವರ ಒಪ್ಪಿಗೆಯಿಂದ ಬಂದಿರುವುದಾಗಿ ಲೆಕ್ಕಿಸಬೇಕು**. ಯಾರಾದರೂ ಒಂದು ಹಿಂದು, ಕ್ರೈಸ್ತ ಮತಕ್ಕೆ ಬದಲಾಗಬೇಕೆಂದುಕೊಂಡರೂ, ಒಂದುವೇಳೆ ಕ್ರೈಸ್ತನಾಗಿ ಬದಲಾದರೂ, ಅದು ದೇವರಿಗೆ ವಿರುದ್ಧ ಚರ್ಯವಾಗುತ್ತದೆ. ದೇವರ ಪರಿಪಾಲನೆಯನ್ನು ಧಿಕ್ಕರಿಸಿದಂತಾಗುವುದು. ಹಾಗೆಯೇ ಒಬ್ಬ ಕ್ರೈಸನು ಹಿಂದೂವಾಗಿ ಬದಲಾಗಬೇಕೆಂದರೂ, ಒಂದುವೇಳೆ ಬದಲಾದರೂ ಆತನು ಸಹ ದೇವರಿಗೆ ವಿರೋಧಿಯಾಗುವನು. ದೇವರ ಪಾಲಕರು ಆತನ ಮೇಲೆ ಕೋಪದಿಂದಿರುತ್ತಾರೆ. ಆದ್ದರಿಂದ **ಮತಾಂತರಿಸುವುದು ಮಹಾಪಾಪವೆಂದು, ದೈವ ನಿರ್ಣಯಕ್ಕೆ ವಿರುದ್ಧವಾಗಿ ಮಾಡಿದಂತಾಗುವುದೆಂದು ತಿಳಿಸುತ್ತಿದ್ದೇವೆ.** ಇಂದಿನ ಕಾಲದಲ್ಲಿ ಮತ ಮೌಢ್ಯ ಎಲ್ಲಾ ದೇಶಗಳಲ್ಲಿ ವ್ಯಾಪಿಸಿದೆ. ಅದರಿಂದಲೇ ಯುದ್ಧಗಳು ನಡೆಯುತ್ತಿವೆ. ಹಿಂಸೆಯು ಉದ್ರೇಕಗೊಳ್ಳುತ್ತಿದೆ. ಒಬ್ಬರಿಗೊಬ್ಬರು ಹೊಡೆದು ಕೊಂಡು ಸಾಯುತ್ತಿದ್ದಾರೆ. ಕೊನೆಗೆ ನಮ್ಮಂಥವರನ್ನು ಕೂಡಾ ಅಗೌರವವಾಗಿ ಮಾತನಾಡುತ್ತಿದ್ದಾರೆ. ಇಂತಹ ಕಾಲ ಬರುತ್ತದೆಂದು ದ್ವಾಪರ ಯುಗದಲ್ಲಿಯೇ ಕೃಷ್ಣನು ಹೇಳಿದ್ದಾನೆ, ಹಾಗೆಯೇ ಬಂದಿದೆ. ನನ್ನದು ಕ್ರೈಸ್ತವು ನಿನ್ನದು ಹಿಂದೂತ್ವವೆಂಬ ಅಜ್ಞಾನ ರೋಗ ಹೋಗುವುದಕ್ಕೆ, ಆ ದಿನವೇ ಔಷಧವನ್ನು ಕೂಡಾ ತಯಾರುಮಾಡಿ ಕೊಟ್ಟುಹೋದಂತೆ ತಿಳಿಯುತ್ತಿದೆ. ಆ ದಿನ ಕೃಷ್ಣನು ಮುಂಬರುವ ಮತರೋಗವನ್ನು ಕುರಿತು ಹೇಳಿದ್ದಾನೆ. ಆತನು ಹೇಳಿದಂತೆಯೇ ಆ ರೋಗ ಬಂದಿದೆ. ಆದರೇ ರೋಗವನ್ನು ಕುರಿತು ಹೇಳಿದಾಗಲೇ, ರೋಗವು

ವ್ಯಾಪಿಸದಂತೆ, ರೋಗವು ಪೂರ್ತಿ ನಿವಾರಣೆ ಆಗುವುದಕ್ಕೆ ಔಷಧ ಜ್ಞಾನವನ್ನು ಕೂಡಾ ತಿಳಿಸಿದ್ದಾನೆ. ಮತವೆಂಬ ರೋಗಕ್ಕೆ, ಜ್ಞಾನವೆಂಬ ಔಷಧವೇನೋ ಆ ದಿನ ಆತನು ಸೂಚಿಸಿದರೂ, ಈ ದಿನ ಅದನ್ನು ತಿಳಿಯಲಾರದ ಸ್ಥಿತಿಯಲ್ಲಿ ಇದ್ದೇವೆ. ಆದ್ದರಿಂದ ಮತರೋಗವು ಉಲ್ಬಣವಾಗುತ್ತಿದೆ. ಹಾಗಾಗದಂತೆ ಈಗ ನಾವು ಕೃಷ್ಣನು ಸೂಚಿಸಿರುವ ವಿಧಾನವನ್ನು ತಿಳಿದುಕೊಳ್ಳೋಣ.

ದೇವರು ಮತವನ್ನು ಸೃಷ್ಟಿಸಲಿಲ್ಲ. ದೇವರು ತನ್ನ ಜ್ಞಾನವನ್ನು ಧರ್ಮಗಳ ರೂಪದಲ್ಲಿ ತಿಳಿಸಿದ್ದಾನೆ. ದೇವರು ತನ್ನ ಶಕ್ತಿಯನ್ನು ತನ್ನ ವ್ಯಕ್ತಿಯಾಗಿ ನಮೂನೆಯಾಗಿ ರೂಪಿಸಿ ಭೂಮಿಮೇಲೆ ಜ್ಞಾನವನ್ನು ಬೋಧಿಸುವಂತೆ ಮಾಡಿದ್ದಾನೆ. ಹಾಗೆ ಬಂದಿರುವ ವ್ಯಕ್ತಿಯನ್ನು ಭಗವಂತನೆಂದು ಹಿಂದೂಗಳು, ಪ್ರವಕ್ತನೆಂದು ಕ್ರೈಸ್ತರು ಅನ್ನುತ್ತಿದ್ದಾರೆ. ಯಾರು ಏನೆಂದರೂ ಬಂದಿರುವ ವ್ಯಕ್ತಿ ದೇವರ ಶಕ್ತಿಯೇ ಎಂದು ಜ್ಞಾಪಕವಿಟ್ಟುಕೊಳ್ಳಬೇಕು. ಅಪಾರವಾದ ದೈವಶಕ್ತಿಯಲ್ಲಿ ಸ್ವಲ್ಪಭಾಗ ವ್ಯಕ್ತಿಯಾಗಿ ಬಂದಾಗ, ಆ ವ್ಯಕ್ತಿಗೆ ಕೂಡಾ ಪ್ರಪಂಚದಲ್ಲಿ ಗುರುತಿಗಾಗಿ ಹೆಸರಿರುತ್ತದೆ. ಒಂದುಕಾಲದಲ್ಲಿ ಒಂದು ಊರಿನಲ್ಲಿ ಇರುವ ಪ್ರವಕ್ತನಿಗಾಗಲೀ, ಭಗವಂತನಿಗಾಗಲೀ ಒಂದು ಹೆಸರಿರುತ್ತದೆ. ದ್ವಾಪರಯುಗದಲ್ಲಿ ದೈವಭಾಗಗಳಲ್ಲಿ ಒಂದು ಭಾಗವಾಗಿ ಬಂದ ವ್ಯಕ್ತಿಯ ಹೆಸರು ಕೃಷ್ಣ. ಕೃಷ್ಣನು ದ್ವಾಪರ ಯುಗದಲ್ಲಿ ಉತ್ತರ ಭಾರತ ದೇಶದಲ್ಲಿ ಮಧುರೆಯಲ್ಲಿ ಹುಟ್ಟಿದ್ದನು. ಭಗವಂತನಾದ ಕೃಷ್ಣನು ದೇವರ ಧರ್ಮಗಳನ್ನು ತಿಳಿಸಿ ಹೋಗಿದ್ದಾನೆ. ಆತನು ಹೋದ ನಂತರ ಸುಮಾರು ಮೂರುಸಾವಿರ ವರ್ಷಗಳಿಗೆ ದೈವಶಕ್ತಿ ಕಲಿಯುಗದಲ್ಲಿ ಇಜ್ರಯೇಲ್ ದೇಶದಲ್ಲಿ ಜೆರೂಸಲೇಮ್ ನಗರದಲ್ಲಿ ಒಬ್ಬ ವ್ಯಕ್ತಿಯಾಗಿ ಹುಟ್ಟಿದೆ. ಆ ವ್ಯಕ್ತಿ ಯೇಸು ಎಂಬ ಹೆಸರಿನಿಂದ ಕರೆಯಲ್ಪಟ್ಟಿದ್ದಾನೆ. ದ್ವಾಪರಯುಗದಲ್ಲಿ ಹುಟ್ಟಿದ ದೈವಶಕ್ತಿ ಹೆಸರು ಕೃಷ್ಣ ಎಂಬ ಎರಡಕ್ಷರಗಳು. ಕಲಿಯುಗದಲ್ಲಿ ಹುಟ್ಟಿರುವ ದೈವಶಕ್ತಿ ಹೆಸರು ಯೇಸು ಎಂಬ ಎರಡಕ್ಷರಗಳು. ದೈವಶಕ್ತಿ ಭೂಮಿಮೇಲಕ್ಕೆ ಬರುವುದೇ ಅಪರೂಪ. ಕೆಲವು ಲಕ್ಷಗಳ ವರ್ಷಗಳಿಗೆ ಒಂದುಸಲ ಬರುವ ದೈವಶಕ್ತಿ, ಮೂರುಸಾವಿರ ವರ್ಷಗಳಿಗೆ ಎರಡನೆಯ ಸಲ ಬರುವುದು ಆಶ್ಚರ್ಯ

ಪಡಬೇಕಾದ ವಿಷಯ. ಭಗವದ್ಗೀತೆಯಲ್ಲಿ ಸಹ ಧರ್ಮಗಳಿಗೆ ಮುಪ್ಪು ಏರ್ಪಟ್ಟಾಗ, ಅಧರ್ಮಗಳು ಉದ್ರೇಕಗೊಂಡಾಗ, ಅಧರ್ಮಗಳನ್ನು ಅಡಗಿಸಿ ಪುನಃ ಧರ್ಮಗಳನ್ನು ತಿಳಿಸುವುದಕ್ಕೆ ಯುಗಯುಗದಲ್ಲಿ ಬರುತ್ತೇನೆಂದಿದ್ದಾನೆ. ಆತನ ಮಾತಿನ ಪ್ರಕಾರ ನೋಡಿದರೂ ಒಂದೊಂದು ಯುಗವು ಕೆಲವು ಲಕ್ಷ ವರ್ಷಗಳ ಕಾಲವಿರುತ್ತದೆ. ಆಗ ಅವಶ್ಯಕತೆಬಂದು ಪ್ರತಿಯುಗದಲ್ಲಿ ಬಂದರೂ, ಒಂದು ಬರುವಿಕೆ (ಜನ್ಮ)ಗು ಮತ್ತೊಂದು ಬರುವಿಕೆಗು ಕೆಲವು ಲಕ್ಷಗಳ ವರ್ಷಗಳ ಅವಧಿ ಇರುತ್ತದೆ. ಅಂಥದರಲ್ಲಿ ದ್ವಾಪರಯುಗ ಅಂತ್ಯದಲ್ಲಿ ಬಂದ ಭಗವಂತನು, ಕೂಡಲೇ ಕಲಿಯುಗದಲ್ಲಿ ಕೇವಲ ಮೂರುಸಾವಿರ ವರ್ಷಗಳಿಗೇ ಬರುವುದು ಆಶ್ಚರ್ಯ ಪಡಬೇಕಾದ ವಿಷಯವೇ ಆಗುತ್ತದೆ. ಒಂದು ಸಲ ಭೂಮಿಮೇಲೆ ದೈವಶಕ್ತಿಯಾದ ಭಗವಂತನು ಬಂದು ಧರ್ಮಗಳನ್ನು ನೆಲೆಗೊಳಿಸಿ ಹೋದರೇ, ಪುನಃ ಅವು ಅಧರ್ಮಗಳಾಗಿ ಬದಲಾಗುವುದಕ್ಕೆ ಕೆಲವು ಲಕ್ಷಗಳ ವರ್ಷಗಳು ಬೇಕಾಗುತ್ತವೆ. ಆ ನೇತೃತ್ವದಲ್ಲಿ ಒಂದೊಂದು ಸಲ ಭಗವಂತನ ಬರುವಿಕೆ ಸುಮಾರು ಹತ್ತು ಯುಗಗಳಿಗೆ ಒಂದು ಸಲ ಇರಬಹುದು. ಹಾಗಿರುವಾಗ ಕೃಷ್ಣನು ಮರಣಿಸುತ್ತಲೇ ಕಲಿಯುಗವು ಕೂಡಲೇ ಪ್ರಾರಂಭವಾಗಿದೆ. ಭಗವಂತನು ಬಂದು ಧರ್ಮಗಳನ್ನು ತಿಳಿಸಿ ಹೋದ ನಂತರ ಮೂರುಸಾವಿರ ವರ್ಷಗಳಿಗೇ ಪುನಃ ದೈವಶಕ್ತಿ ಭೂಮಿಮೇಲೆ ಹುಟ್ಟಿದೆಯೆಂದು ಹೇಳಿದರೇ, ಮೂರುಸಾವಿರ ವರ್ಷಗಳಿಗೇ ಧರ್ಮಗಳು ಅಧರ್ಮಗಳಾಗಿವೆಯಾ? ಎಂಬ ಪ್ರಶ್ನೆ ಬರಬಹುದು. ಒಂದುವೇಳೆ ಅಷ್ಟುಬೇಗ ಧರ್ಮಗಳು, ಅಧರ್ಮಗಳಾಗಿ ಬದಲಾಗಿಹೋದರೇ, ದೈವಶಕ್ತಿ ಭಗವಂತನಾಗಿ ಧರ್ಮಗಳನ್ನು ತಿಳಿಸುವುದಕ್ಕೆ ಒಂದು ಯುಗದಲ್ಲಿಯೇ ಎಷ್ಟೋ ನೂರು ಸಲ ಭೂಮಿಮೇಲಕ್ಕೆ ಬರಬೇಕಾಗಿರುತ್ತದೆ. ಹಾಗೆ ನಡೆಯುತ್ತದಾ? ಒಂದು ಯುಗದಲ್ಲಿಯೇ ಧರ್ಮಗಳು ಅಧರ್ಮಗಳಾಗಿ ಎಷ್ಟೋ ನೂರು ಸಲ ಬದಲಾಗುವುದಾ? ಎಂದು ಪ್ರಶ್ನಿಸಿಕೊಂಡರೇ ಅದಕ್ಕೆ ಉತ್ತರ ಈ ವಿಧವಾಗಿದೆ.

ದೈವಶಕ್ತಿ ಭಗವಂತನಾಗಿ ಬರಬೇಕೆಂದರೇ ಅಧರ್ಮಗಳು ಒಂದು ಹಂತಕ್ಕೆ ಬೆಳೆಯಬೇಕು. ಅಧರ್ಮಗಳು ಒಂದು ಹಂತವನ್ನು ಮುಟ್ಟುತ್ತಲೇ ಭಗವಂತನ ಜನ್ಮ ತನಗೆ ತಾನಾಗಿ ಬರುತ್ತದೆ. ಹಾಗೆ ಭಗವಂತನು ಭೂಮಿಮೇಲಕ್ಕೆ ಬಂದು ಒಂದುಬಾರಿ ಧರ್ಮಗಳನ್ನು ನೆಲೆಗೊಳಿಸಿ ಹೋದರೇ ಪುನಃ ಅವು ಅಧರ್ಮಗಳಾಗಿ ಬದಲಾಗುವುದಕ್ಕೆ ಕೆಲವು ಯುಗಗಳ ಕಾಲವು ಬೇಕಾಗುತ್ತದೆ. ಒಂದು ಅಂದಾಜಿನ ಪ್ರಕಾರ ಸುಮಾರು ಹತ್ತು ಯುಗಗಳಿಗೆ ಒಂದುಬಾರಿ ದೈವಶಕ್ತಿ ಮನುಷ್ಯನಾಗಿ ಭೂಮಿಮೇಲಕ್ಕೆ ಬರಬಹುದು. ಇದನ್ನು ಅನುಸರಿಸಿದರೆ ಸುಮಾರು ಒಂದುಕೋಟಿ ವರ್ಷಗಳ ನಂತರ 8 ಲಕ್ಷಗಳಿಂದ 10 ಲಕ್ಷಗಳ ವರ್ಷಗಳ ಒಳಗೆ ಭಗವಂತನ ಬರುವಿಕೆ ಇರಬಹುದೆಂದು ಅಂದುಕೊಳ್ಳುತ್ತೇವೆ. ಒಂದು ಸಲ ಭೂಮಿಮೇಲೆ ಧರ್ಮಗಳನ್ನು ನೆಲೆಗೊಳಿಸಿ ಹೋದರೇ ಪುನಃ ಅವು ಅಧರ್ಮಗಳಾಗಿ ಬದಲಾಗುವುದಕ್ಕೆ ಸುಮಾರು ಹತ್ತುಯುಗಗಳ ಕಾಲ ಬೇಕಾಗುತ್ತದೆಯೆಂದು ತಿಳಿಯುತ್ತಿದೆ. ಇದನ್ನು ಅನುಸರಿಸಿ ಭಗವಂತನ ಬರುವಿಕೆ ಶೀಘ್ರವಾಗಿ ಇರುವುದಿಲ್ಲವೆಂದು ತಿಳಿಯುತ್ತಿದೆ. ಹಾಗಿರುವಾಗ ಕೃಷ್ಣನ ನಂತರ ಕೇವಲ ಮೂರುಸಾವಿರ ವರ್ಷಗಳಿಗೇ ಪುನಃ ಯೇಸುವಾಗಿ ಹುಟ್ಟಿದ್ದಾನೆಂದು ಹೇಳುವುದೇನು? ಎಂದು ಕೆಲವರು ನನ್ನನ್ನು ಪ್ರಶ್ನಿಸಬಹುದು. ಅದಕ್ಕೆ ನಮ್ಮಬಳಿಯಿಂದ ಬರುವ ಉತ್ತರ ಏನೆಂದರೇ! ದೇವರು ಭೂಮಿಮೇಲೆ ಒಂದುಬಾರಿ ಧರ್ಮಗಳನ್ನು ನೆಲಗೊಳಿಸುವುದಕ್ಕೆ ಸ್ವಲ್ಪಕಾಲ ಬೇಕಾಗುತ್ತದೆ. ದ್ವಾಪರಯುಗ ಅಂತ್ಯದಲ್ಲಿ ಕೃಷ್ಣನು ಬಂದು ಒಂದುಬಾರಿ ಅರ್ಜುನನಿಗೆ ಮಾತ್ರ ಧರ್ಮಗಳನ್ನು ತಿಳಿಸಿದ್ದಾನೆ. ಅದೂ ಆತನು ಬಂದ ನಂತರ, ಸಮಯವನ್ನು ನೋಡಿ ಸುಮಾರು 90 ವರ್ಷಗಳ ವಯಸ್ಸಿನಲ್ಲಿ ಕೇವಲ ಒಂದುಬಾರಿ ಹೇಳುವುದು ನಡೆದಿದೆ. ಧರ್ಮಗಳನ್ನು ನೆಲೆಗೊಳಿಸುವುದಕ್ಕೆ ಸುಮಾರು ಕೋಟಿ 10 ಲಕ್ಷಗಳ ವರ್ಷಗಳಿಗೆ ಒಂದುಬಾರಿ ಬರುವ ಭಗವಂತನು ಕೇವಲ ಹತ್ತು ನಿಮಿಷಗಳ ಒಳಗೆ ಧರ್ಮಗಳನ್ನು ಬೋಧಿಸುವನಾ? ಹಾಗೆ ಬೋಧಿಸುವುದು ಸಂಪೂರ್ಣವಾಗಿ ಅಧರ್ಮಗಳನ್ನು ಇಲ್ಲದೇ ಮಾಡಿದಂತಾಗುವುದಾ? ಧರ್ಮಗಳನ್ನು ನೆಲೆಗೊಳಿಸುವುದು ಎಷ್ಟೋ ಉನ್ನತವಾದ ಕೆಲಸವಾದರೇ, ಆ

ಕೆಲಸ ಕೃಷ್ಣನ ಜನ್ಮದಲ್ಲಿಯೇ ಮಾಡಿದ್ದಾನಾ? ಒಂದುಬಾರಿ ನೆಲಗೊಳಿಸಲ್ಪಡುವ ಧರ್ಮಗಳು ಹತ್ತು ಕಾಲಗಳಿಗೆ ಮೇಲಾಗಿ ಎಂದರೇ ಹತ್ತು ಯುಗಗಳಿಗೆ ಮೇಲಾಗಿ ಇರಬೇಕಾಗಿರುತ್ತದೆ. ಅಷ್ಟು ದೀರ್ಘಕಾಲ ಇರಬೇಕಾದ ಧರ್ಮಗಳು ಅಷ್ಟು ಸುಲಭವಾಗಿ ಕೇವಲ ಕೆಲವೇ ನಿಮಿಷಗಳಲ್ಲಿ ಬೋಧಿಸುವನಾ? ಎಂದು ಯೋಚಿಸಬೇಕಾದ ಕೆಲಸವಿದೆ.

ಹಾಗೆ ಯೋಚಿಸಿದರೇ ತಿಳಿಯುವ ರಹಸ್ಯವೊಂದು ಇದೆ. ಈ ರಹಸ್ಯವು ಸುಲಭವಾಗಿ ತಿಳಿಯುವುದಕ್ಕೆ ಒಂದು ಚಿಕ್ಕ ಉದಾಹರಣೆಯನ್ನು ತೆಗೆದು ಕೊಳ್ಳೋಣ. ಒಬ್ಬ ವ್ಯಕ್ತಿಗೆ ಹತ್ತು ಲೀಟರುಗಳ ಹಾಲನ್ನು ಮಾರಬೇಕೆಂದು ಆತನ ಯಜಮಾನ ಹೇಳಿದ್ದಾನೆ. ಆಗ ಆ ವ್ಯಕ್ತಿ ಒಂದು ಊರಿನೊಳಗೆ ಹೋಗಿ ಹಾಲನ್ನು ಮಾರಲು ಪ್ರಾರಂಭಿಸಿದನು. ಹಾಲು ಯಾರಿಗೆ ಅವಶ್ಯವೋ ಕೇಳಿ ಹಾಲನ್ನು ಮಾರಿದ್ದಾನೆ. ಆದರೇ ಆ ಊರಿನಲ್ಲಿ ಕೇವಲ ಐದು ಲೀಟರುಗಳ ಹಾಲನ್ನೇ ಮಾರಿದ್ದಾನೆ. ಇನ್ನೂ ಐದು ಲೀಟರುಗಳ ಹಾಲು ಉಳಿದಿವೆ. ಆಗ ಪಕ್ಕದ ಗ್ರಾಮಕ್ಕೆ ಹೋಗಿ ಉಳಿದಿರುವ ಹಾಲನ್ನು ಮಾರಿದನು. ಮಾರಿದ ಹಾಲು ಹತ್ತು ಲೀಟರುಗಳು, ತಿರುಗಿದ ಊರುಗಳು ಎರಡು, ಮಾರಿದವನು ಒಬ್ಬನೇ. ಆದರೇ ಇಲ್ಲಿ ಒಂದು ತತಂಗವನ್ನು ಗಮನಿಸೋಣ. ಮೊದಲು ಹಾಲು ಮಾರಿದ ಊರಿನಲ್ಲಿ ಎಲ್ಲರೂ ಶೂದ್ರರೇ ಇದ್ದಾರೆ. ಆದಕಾರಣ ಮಾರುವವನು ಯಾವ ಆತಂಕವಿಲ್ಲದಂತೆ ಮಾರಿದ್ದಾನೆ. ಎರಡನೆಯ ಊರಿನಲ್ಲಿ ಎಲ್ಲರೂ ಬ್ರಾಹಣರೇ ಇದ್ದಾರೆ. ಅವರು ಬ್ರಾಹ್ಮಣರು ಮಾರುವ ಹಾಲನ್ನು ಮಾತ್ರವೇ ಕೊಳ್ಳುತ್ತಾರೆ. ಆದರೇ ಶೂದ್ರರು ಮಾರುವ ಹಾಲನ್ನು ಕೊಳ್ಳುವುದಿಲ್ಲ. ಮಾರುವವನು ಬ್ರಾಹಣನಲ್ಲ. ಆದರೇ ಮಾರಬೇಕಾಗಿರುವ ಹಾಲು ಐದು ಲೀಟರುಗಳು ಉಳಿದಿವೆ. ಆದ್ದರಿಂದ ಹಾಲನ್ನು ಮಾರಬೇಕಾದ ವ್ಯಕ್ತಿ ಮೈಮೇಲಿನ ಅಂಗಿಯನ್ನು ತೆಗೆದುಹಾಕಿ, ಒಂದು ಜನಿವಾರವನ್ನು ಕೊರಳಿಗೆ ಹಾಕಿಕೊಂಡು, ಪಂಚೆಕಟ್ಟಿಕೊಂಡು ಆ ಊರಿನೊಳಗೆ ಹೋಗಿ ಹಾಲನ್ನು ಮಾರಿದ್ದಾನೆ. ಅಂಗಿ ಇಲ್ಲದೇ ಕೆಳಗೆ ಪಂಚೆ ಮಾತ್ರ ಕಟ್ಟಿಕೊಂಡು ಇರುವುದರಿಂದ, ಆತನು

ಬ್ರಾಹಣನಹಾಗೆ ಕಾಣಿಸುತ್ತಿದ್ದಾನೆ. ಮೇಲಾಗಿ ತನ್ನ ಹೆಸರು ಶಂಕರಯ್ಯಾ ಆದರೇ ಶಂಕರಶಾಸ್ತ್ರೀ ಎಂದು ಹೇಳಿಕೊಂಡಿದ್ದಾನೆ. ಹೆಸರಿನಲ್ಲು, ಆಕಾರದಲ್ಲು ಬ್ರಾಹ್ಮಣನಾಗಿ ಕಾಣಿಸಿ ಮಾರುವುದರಿಂದ ಆತನ ಐದು ಲೀಟರುಗಳ ಹಾಲನ್ನು ಅಲ್ಲಿನ ಬ್ರಾಹ್ಮಣರು ಕೊಂಡುಕೊಂಡಿದ್ದಾರೆ. ಹತ್ತು ಲೀಟರುಗಳ ಹಾಲನ್ನು ಮಾರಿದ ನಂತರ ಹಾಲಿನವನಿಗೆ ಜನಿವಾರದಿಂದ ಕೆಲಸವಿಲ್ಲ ಹಾಗೆಯೇ ಪಂಚೆಯೊಂದಿಗೆ ಕೆಲಸವಿಲ್ಲ. ಆದ್ದರಿಂದ ಅವನು ಮನೆಗೆ ಹೋಗಿ ಜನಿವಾರವನ್ನು ಪಂಚೆಯನ್ನು ತೆಗೆದುಹಾಕಿ ತಾನು ಯಾವಾಗಲೂ ಕಟ್ಟಿಕೊಳ್ಳುವ ಲುಂಗಿಯನ್ನು ಕಟ್ಟಿಕೊಂಡು ಮಲಗಿಕೊಂಡನು. ಅಲ್ಲಿ ಹತ್ತು ಲೀಟರುಗಳ ಹಾಲನ್ನು ಮಾರುವುದು ಮುಖ್ಯವಾದ ಉದ್ದೇಶ. ಎಷ್ಟು ಊರುಗಳಲ್ಲಿ ಮಾರಿದ್ದೀಯ ಎಂದಾಗಲೀ, ಎಷ್ಟು ಹೊತ್ತು ಮಾರಿದ್ದೀಯ ಎಂದಾಗಲೀ ಹಾಲಿನ ಯಜಮಾನ ಕೇಳುತ್ತಿಲ್ಲ. ಹಾಲಿನ ಯಜಮಾನನ ಹಾಲನ್ನು ಹಾಲಿನವನು (ಹಾಲು ಮಾರುವವನು) ಮಾರಬೇಕೆನ್ನುವುದು ನಿಯಮ. ಅಷ್ಟೇ ಹೊರತು ಈ ಬೀದಿಯಲ್ಲೇ ಮಾರಬೇಕು, ಆ ಊರಿನಲ್ಲೇ ಮಾರಬೇಕು, ಒಂದು ಗಂಟೆಯೊಳಗೇ ಮಾರಬೇಕು, ಅರ್ಧ ಗಂಟೆಯೊಳಗೇ ಮಾರಬೇಕು ಎಂಬ ನಿಯಮವು ಇಲ್ಲ. ಆದ್ದರಿಂದ ಹಾಲಿನವನು ಹತ್ತು ಲೀಟರುಗಳ ಹಾಲನ್ನು ಮಾರಿದರೇ ಹಾಲಿನ ಯಜಮಾನನ ಲೆಕ್ಕದಲ್ಲಿ ಹಾಲಿನವನು ಒಂದು ದಿನ ಕೆಲಸ ಮಾಡಿದಂತಾಗುವುದು.

ಮೇಲಿನ ವಿಧವಾಗಿ ಹೋಲಿಸಿಕೊಂಡರೇ ಹಾಲಿನ ಯಜಮಾನ ಇದ್ದಹಾಗೆ ಪರಮಾತ್ಮ ಇದ್ದಾನೆ. ಹಾಲಿನವನು ಇರುವಹಾಗೆ ಭಗವಂತನು ಇದ್ದಾನೆ. ಹಾಲಿನವನು ಮಾರುವ ಹಾಲು ಹಾಲಿನ ಯಜಮಾನನವು ಆದಂತೆ, ಭಗವಂತನು ಬೋಧಿಸುವ ಧರ್ಮಗಳು ಪರಮಾತ್ಮನವು (ದೇವರವು). ಮಾರಬೇಕಾಗಿರುವ ಹಾಲು ಹತ್ತು ಲೀಟರುಗಳಾದಂತೆ ತಿಳಿಸಬೇಕಾದ ಧರ್ಮಗಳು ಶೇ.ನೂರರಷ್ಟು. ಹಾಲಿನವನು ಹಾಲನ್ನು ಎರಡು ಊರುಗಳಲ್ಲಿ ಮಾರಿದರೂ ಫರವಾಗಿಲ್ಲ ಎನ್ನುವಂತೆ, ಭಗವಂತನು ಶೇಕಡ ನೋರರಷ್ಟು ಧರ್ಮಗಳನ್ನು ಎರಡು ದೇಶಗಳಲ್ಲಿ ಹೇಳಿದರೂ ಫರವಾಗಿಲ್ಲ. ಹತ್ತು ಲೀಟರುಗಳ ಹಾಲನ್ನು

ಮಾರಿದಾಗಲೇ ಹಾಲಿನವನಿಗೆ ಒಂದುದಿನ ಕೆಲಸವಾದಂತೆ ಲೆಕ್ಕಿಸಲ್ಪಡುತ್ತದೆ. ಶೇಕಡ ನೂರರಷ್ಟು ಧರ್ಮಗಳನ್ನು ತಿಳಿಸಿದಾಗಲೇ ಭಗವಂತನಿಗೆ ಒಂದುಬಾರಿ ಧರ್ಮಗಳನ್ನು ಬೋಧಿಸಿದಂತಾಗುವುದು. ಹಾಲಿನವನು ಹತ್ತು ಲೀಟರುಗಳ ಹಾಲನ್ನು ಮಾರುವುದಕ್ಕೆ ಎರಡು ಊರಿನೊಳಗೆ ಹೋಗಿ ಎರಡು ಊರುಗಳಲ್ಲಿ ಕಾಣಿಸಿದಂತೆ, ಭಗವಂತನು ಶೇಕಡ ನೂರರಷ್ಟು ಧರ್ಮಗಳನ್ನು ತಿಳಿಸುವುದಕ್ಕೆ ಎರಡು ದೇಶಗಳೊಳಗೆ ಹೋಗಿ ಎರಡು ದೇಶಗಳಲ್ಲಿ ಕಾಣಿಸುವನು. ಒಂದು ಊರಿನಲ್ಲಿ ಶೂದ್ರನಾಗಿ, ಒಂದು ಊರಿನಲ್ಲಿ ಬ್ರಾಹ್ಮಣನಾಗಿ ಕಾಣಿಸಿದಂತೆ ಒಂದು ದೇಶದಲ್ಲಿ ಒಂದು ಹಿಂದುಗಳ ಪ್ರವಕ್ತನಾಗಿ, ಮತ್ತೊಂದು ದೇಶದಲ್ಲಿ ಕ್ರೈಸ್ತ ಪ್ರವಕ್ತನಾಗಿ ಕಾಣಿಸುವನು. ಹಾಲಿನವನು ಮುಂಜಾನೆ ಆರು ಗಂಟೆಗಳಿಗೆ ಒಂದು ಊರಿನಲ್ಲಿ ಸ್ವಲ್ಪ ಹಾಲನ್ನು ಮಾರಿ, ನಂತರ ಸ್ವಲ್ಪಹೊತ್ತಿಗೆ ಏಳು ಗಂಟೆಗಳಿಗೆ ಎರಡನೆಯ ಊರಿನೊಳಗೆ ಹೋಗಿ ಅಲ್ಲಿ ಅವರ ಕುಲಸ್ಥನಾಗಿ ಕಾಣಿಸಿ, ಏಳು ಗಂಟೆಗಳಿಗೆ ಹಾಲನ್ನು ಮಾರಿದಂತೆ, ಭಗವಂತನು ಕೃಷ್ಣನಾಗಿ ದ್ವಾಪರಯುಗ ಕೊನೆಯಲ್ಲಿ ದೇವರ ಧರ್ಮಗಳನ್ನು ಬೋಧಿಸಿ ನಂತರ ಸ್ವಲ್ಪ ಕಾಲಕ್ಕೆ (ಮೂರುಸಾವಿರ ವರ್ಷಗಳಿಗೆ) ಇಜ್ರಾಯೆಲ್ ದೇಶದೊಳಗೆ ಹೋಗಿ ಅಲ್ಲಿ ಅವರ ಮತಪ್ರವಕ್ತನಾಗಿ ಕಾಣಿಸಿ, ಕಲಿಯುಗದಲ್ಲಿ ದೈವ ಧರ್ಮಗಳನ್ನು ಬೋಧಿಸಿದ್ದಾನೆ. ಹತ್ತು ಲೀಟರುಗಳ ಹಾಲನ್ನು ಎರಡು ಊರುಗಳಲ್ಲಿ ಮಾರಿದಾಗ ಹಾಲಿನವನಿಗೆ ಒಂದುದಿನ ಕೆಲಸವಾದಂತೆ, ಭಗವಂತನು ಬೇರೆಬೇರೆ ಸಮಯಗಳಲ್ಲಿ ಬೇರೆಬೇರೆ ದೇಶಗಳಲ್ಲಿ ಶೇಕಡ ನೂರರಷ್ಟು ಧರ್ಮಗಳನ್ನು ಬೋಧಿಸಿದಾಗಲೇ ಆತನಿಗೆ ಒಂದು ಅವತಾರದ ಕೆಲಸ ಪೂರ್ತಿಯಾದಂತೆ ಆಗುವುದು. ಹಾಲಿನವನು ಯಜಮಾನನ ಹಾಲನ್ನು ಎಷ್ಟು ಊರುಗಳಲ್ಲಿ ಮಾರಿದರೂ, ಎಷ್ಟು ಸಮಯದಲ್ಲಿ ಮಾರಿದರೂ ಹತ್ತು ಲೀಟರುಗಳ ಹಾಲನ್ನು ಮಾರಿದಾಗಲೇ ಯಜಮಾನನ ದೃಷ್ಠಿಯಲ್ಲಿ ಒಂದುದಿನ ಹಾಲಿನವನು ಕೆಲಸಮಾಡಿದಂತೆ ಲೆಕ್ಕಿಸಲ್ಪಡುವುದು. ಅದೇ ವಿಧವಾಗಿ ಭಗವಂತನು ಎಷ್ಟು ದೇಶಗಳಲ್ಲಿ ಧರ್ಮಗಳನ್ನು ಹೇಳಿದರೂ, ಎಷ್ಟು ಕಾಲದಲ್ಲಿ ಹೇಳಿದರೂ, ಶೇಕಡ

ನೂರರಷ್ಟು ಧರ್ಮಗಳನ್ನು ತಿಳಿಸಿದಾಗಲೇ, ದೇವರ ದೃಷ್ಠಿಯಲ್ಲಿ ಭಗವಂತನು ಒಂದು ಸಲ ಭೂಮಿಮೇಲೆ ಧರ್ಮಗಳನ್ನು ಬೋಧಿಸಿದಂತಾಗುವುದು.

| | |
|---|---|
| ಹಾಲಿನ ಯಜಮಾನ | – ಧರ್ಮಗಳಿಗೆ ಅಧಿಪತಿಯಾದ ದೇವರು |
| ಹಾಲು | – ಧರ್ಮಗಳು |
| ಹಾಲಿನವನು | – ಭಗವಂತನು |
| ಹತ್ತು ಲೀಟರುಗಳ ಹಾಲು | – ಶೇಕಡ ನೂರರಷ್ಟು ಧರ್ಮಗಳು |
| ಎರಡು ಊರುಗಳು | – ಎರಡು ಭೂ ಭಾಗಗಳು |
| ಶಂಕರಯ್ಯ | – ಕೃಷ್ಣ |
| ಶಂಕರಶಾಸ್ತ್ರಿ | – ಯೇಸು |
| ಹಾಲಿನವನು (ಶೂದ್ರನು) | – ಭಗವಂತನಾದ ಕೃಷ್ಣನು |
| ಹಾಲಿನವನು (ಬ್ರಾಹ್ಮಣನು) | – ಭಗವಂತನು ಪ್ರವಕ್ತ |
| ಮಾರಿದ ಸಮಯ | – ಬೋಧಿಸಿರುವ ಕಾಲ |
| ಆರು ಗಂಟೆಗಳಲ್ಲಿ | – ದ್ವಾಪರಯುಗದಲ್ಲಿ |
| ಏಳು ಗಂಟೆಗಳಲ್ಲಿ | – ಕಲಿಯುಗದಲ್ಲಿ |
| ಹಾಲನ್ನು ಮಾರುವುದು | – ಧರ್ಮಗಳನ್ನು ಬೋಧಿಸುವುದು |
| ಒಂದು ದಿನದ ಕೆಲಸ | – ಒಂದು ಅವತಾರದ ಕೆಲಸ |
| ಹಾಲನ್ನು ಕೊಂಡಿರುವವರು | – ಧರ್ಮಗಳನ್ನು ತಿಳಿದುಕೊಂಡವರು |

ಹಾಲನ್ನು ಕೊಂಡ ಒಂದು ಊರು – ಮೊದಲು ಧರ್ಮಗಳನ್ನು ತಿಳಿದಿರುವ ದೇಶ **ಭಾರತ ದೇಶ**.

ಹಾಲನ್ನು ಕೊಂಡ ಎರಡನೆಯ ಊರು–ನಂತರ ಧರ್ಮಗಳನ್ನು ತಿಳಿದಿರುವ ದೇಶ **ಇಜ್ರಾಯೇಲ್ ದೇಶ**.

ಒಂದು ಉದ್ದನೆಯ ಸರಳ ರೇಖೆ ಇದೆಯೆಂದುಕೊಳ್ಳೋಣ. ಆ ರೇಖೆಗೆ ಎರಡು ಧೃವಗಳಿರುತ್ತವೆ. ಆ ಎರಡು ಧೃವಗಳನ್ನು ಸೇರಿಸುವ ಮಧ್ಯ ರೇಖೆ ಇರುತ್ತದೆ. ರೇಖೆ ಎಂದರೇ ಗೀಚಿದ ಗೆರೆಯೆಂದು ಎಲ್ಲರಿಗೂ ತಿಳಿದಿದೆ. ಒಂದು ಗೆರೆಗೆ ಎರಡು ಧೃವಗಳು, ಆ ಎರಡು ಧೃವಗಳನ್ನು ಸೇರಿಸುವ ಗೆರೆ ಇರುತ್ತದೆ. ಕೆಳಗೆ ಚಿತ್ರದಲ್ಲಿ ನೋಡಿರಿ.




ಚಿತ್ರದಲ್ಲಿ ಕಾಣಿಸುವ ಒಂದನೆಯ ಕೊನೆ ಉತ್ತರ ಧೃವ, ಹಾಗೆಯೇ ಎರಡನೆಯ ಕೊನೆ ದಕ್ಷಿಣ ಧೃವ. ಒಂದು ಎರಡು ಕೊನೆಗಳ ಸೇರಿಸುತ್ತಿರುವ ರೇಖೆಯನ್ನು ಎರಡು ಧೃವಗಳನ್ನು ಏಕಸ್ಥಾನವಾಗಿ ಸಮಾನವಾಗಿ ತೋರಿಸುವ ಗೆರೆ ಎಂದು ಅನ್ನುತ್ತಿದ್ದೇವೆ. ಗೆರೆ ಇದೆಯೆಂದರೇ ಧೃವಗಳಿರುತ್ತವೆ. ಎರಡು ಧೃವಗಳಿವೆಯೆಂದರೇ ನೋಡುವುದಕ್ಕೆ ಅವು ಒಂದಕ್ಕೊಂದು ವಿರುದ್ಧ ದಿಶೆಗಳಲ್ಲಿರುತ್ತವೆ. ವಿರುದ್ಧ ದಿಶೆಗಳಲ್ಲಿ ಎರಡು ಧೃವಗಳಿದ್ದರೂ, ಎರಡನ್ನೂ ಸಮಾನವಾಗಿ ತೋರಿಸುವ ಗೆರೆ ಇರುತ್ತದೆ. ಒಟ್ಟಾರೆ ಹೇಳಬೇಕೆಂದರೇ ಒಂದು ಗೆರೆ ಮೂರು ಭಾಗಗಳಾಗಿ ಇದೆಯೆಂದು ಹೇಳಬಹುದು. ಇದನ್ನು ಅನುಸರಿಸಿ ಗೀಚಲ್ಪಟ್ಟಿರುವ ಗೆರೆ ಕೂಡಾ ತ್ರೈತದಿಂದ ಕೂಡಿಕೊಂಡು ಇದೆಯೆಂದು ತಿಳಿಯುತ್ತಿದೆ. ಈಗ ಅಸಲು ವಿಷಯಕ್ಕೆ ಬರೋಣ. ಭಗವಂತನು ತಿಳಿಸಿರುವುದು ಭಗವದ್ಗೀತೆ, ಭಗವಂತನು ಹೇಳಿರುವ ಗೀತೆಗು ಕೂಡಾ ತ್ರೈತವು ಅನ್ವಯಿಸುತ್ತಿದೆ. ಭಗವಂತನ ಗೆರೆ ಮೂರು ಭಾಗಗಳಾಗಿ ಇದ್ದೂ ಮೂವರು ಪುರುಷರನ್ನು ತಿಳಿಸುತ್ತಿದೆ. ಭಗವಂತನಿಂದ ಗೀಚಲ್ಪಟ್ಟ ಗೆರೆಗು ಕೂಡಾ ಎರಡು ಧೃವಗಳಿವೆ. ಭಗವದ್ಗೀತೆ ಕೂಡಾ ಒಂದುಕೊನೆ ಉತ್ತರ ಧೃವವಾಗಿ, ಎರಡನೆಯ ಕೊನೆ ದಕ್ಷಿಣ ಧೃವವಾಗಿ ಇದೆ. ಉತ್ತರ ಧೃವ ದೇವರು, ದಕ್ಷಿಣ ಧೃವ ಜೀವಿಯೆಂದು ಇದರ ಅರ್ಥ. ಉತ್ತರ ಧೃವವಾಗಿರುವ ಮೊದಲ ಕೊನೆ ಭಾಗವು ಪರಮಾತ್ಮನೆಂದೂ, ದಕ್ಷಿಣ ಧೃವವಾಗಿರುವ ಎರಡನೆಯ ಕೊನೆ ಭಾಗವು

ಜೀವಾತ್ಮ ಎಂದೂ, ಅವುಗಳಿಗೆ ಮಧ್ಯದಲ್ಲಿರುವ ಗೆರೆ ಜೀವಾತ್ಮನನ್ನು ಪರಮಾತ್ಮನನ್ನು ಏಕ ಮಾಡುವ ಆತ್ಮವೆಂದೂ ತಿಳಿಯುತ್ತಿದೆ. ಸರ್ವ ಜಗತ್ತಿನಲ್ಲಿ ಯಾವ ಜೀವಾತ್ಮವಾದರೂ ಪರಮಾತ್ಮನನ್ನು ಸೇರಬೇಕೆಂದರೇ ಆತ್ಮ ಮೂಲಕವೇ ಸಾಧ್ಯವಾಗುತ್ತದೆ. ಜೀವಾತ್ಮಕ್ಕೆ ದಾರಿ ಆತ್ಮವೇ. ಆತ್ಮ ದಾರಿಯಲ್ಲಿ ಪ್ರಯಾಣಿಸಿದರೇನೆ ಪರಮಾತ್ಮ ಎಂಬ ಗಮ್ಯವನ್ನು ಸೇರಬಹುದು. ಆದ್ದರಿಂದ ದೇವರನ್ನು ಸೇರಬೇಕೆಂಬ ಯಾವ ಜೀವಿಯಾದರೂ ಆತ್ಮವನ್ನು ಅಧ್ಯಯನ ಮಾಡಲೇ ಬೇಕಾಗುತ್ತದೆ. ಇದು ಶಾಸನ. ಆತ್ಮವನ್ನು ಕುರಿತು ಅಧ್ಯಯನ ಮಾಡುವುದನ್ನೇ "ಆಧ್ಯಾತ್ಮಿಕ" ಎನ್ನುತ್ತೇವೆ. ಆಧ್ಯಾತ್ಮಿಕವನ್ನು ತಿಳಿಯದೇ ಜಗತ್ತಿನಲ್ಲಿ ಯಾರಿಗೂ ಮುಕ್ತಿ ಲಭಿಸುವುದಿಲ್ಲ.

ಗೀಚಲ್ಪಟ್ಟ ಗೆರೆ ಮೂರು ಭಾಗಗಳಾಗಿ ಇದ್ದಹಾಗೆ, ಹೇಳಲ್ಪಟ್ಟಿರುವ ಗೀತೆ ಮೂರು ಭಾಗಗಳಾಗಿ ಇದೆ. ತನ್ನ ಗೀತೆ ತ್ರೈತದೊಂದಿಗೆ ಕೂಡಿಕೊಂಡಿದೆ ಯೆಂದೂ, ಮೂರು ಭಾಗಗಳಾಗಿ ಪ್ರಜೆಗಳಿಗೆ ತಿಳಿಯುವುದೆಂದು ತಿಳಿದ ಕೃಷ್ಣನು, ಆ ರಹಸ್ಯವನ್ನು ಕೊನೆಯಲ್ಲಿ ಬೇಟೆಗಾರನಿಗೆ ಹೇಳಿಹೋಗಿದ್ದಾನೆ. ಹಾಲಿನವನು ಎರಡು ಊರುಗಳಲ್ಲಿ ಹಾಲು ಮಾರಿದಂತೆ, ಭಗವಂತನು ಎರಡು ಸಮಯಗಳಲ್ಲಿ ಎರಡು ದೇಶಗಳಲ್ಲಿ ತನ್ನ ಬೋಧನೆಯನ್ನು ತಿಳಿಸಬೇಕಾಗಿದೆ. ಭೋಜನ ಮಾಡುವವನು ಮಜ್ಜಿಗೆಯಿಂದ ತಿಂದಾಗಲೇ ಅದು ಸಂಪೂರ್ಣ ಭೋಜನ ವೆಂದು ಅಂದುಕೊಳ್ಳುವಹಾಗೆ, ಕೊನೆಯಲ್ಲಿ ಮೂರನೆಯ ಬಾರಿ ಬೋಧನೆಯೊಂದರ ವಿವರವನ್ನು ತಿಳಿಸಿದಾಗ ಸಂಪೂರ್ಣವಾಗಿ ಹೇಳಿದಂತಾಗು ವುದು. ಗೀಚಲ್ಪಟ್ಟಿರುವ ಗೆರೆ ಮೂರು ಭಾಗಗಳಿರುವಹಾಗೆ, ಹೇಳಲ್ಪಟ್ಟಿರುವ ಗೀತೆ ಮೂರು ಭಾಗಗಳಾಗಿರಬೇಕು. ಹಾಗೆಯೇ ಹೇಳಲ್ಪಟ್ಟಿರುವ ಗೀತೆ ಮೂರು ಅತ್ಮಗಳನ್ನು ತಿಳಿಸುವುದಾಗಿ ಇರಬೇಕು. ಈ ಸೂತ್ರ ಅನ್ವಯಿಸಿದಾಗ ಅದು ಭಗವಂತನು ಮಾನವನಿಗೆ ಬೋಧಿಸಿರುವ ಬೋಧನೆ ಆಗುತ್ತದೆ. ಯಾವಾಗಾದರೇ ಕೃಷ್ಣನು ಅರ್ಜುನನಿಗೆ ಧರ್ಮಗಳನ್ನು ಯುದ್ಧರಂಗದಲ್ಲಿ ತಿಳಿಸಿದ್ದಾನೋ, ಆಗ ಹಾಲಿನವನು ತನ್ನ ಹಾಲನ್ನು ಒಂದು ಊರಿನಲ್ಲಿ ಮಾರಿದಂತಾಗಿದೆ. ಇನ್ನೂ

ಕೆಲವು ಧರ್ಮಗಳನ್ನಾಗಲೀ ಅಥವಾ ಒಂದು ಧರ್ಮವನ್ನಾಗಲಿ ಮತ್ತೊಂದು ಕಾಲದಲ್ಲಿ ಮತ್ತೊಂದು ದೇಶದಲ್ಲಿ ಹೇಳಬೇಕೆಂದು ಕೃಷ್ಣನಿಗೆ ತಿಳಿದಿದೆ. ಹಾಗೆ ಎರಡನೆಯ ಬಾರಿ ಎರಡನೆಯ ಕಡೆ ತಾನೇ ಹೇಳಬೇಕೆಂದು, ಹಾಗೆ ಹೇಳಿರುವುದನ್ನೇ ಮೂರನೆಯಬಾರಿ ತಾನೇ ವಿವರಿಸಬೇಕೆಂದೂ ಕೂಡಾ ಕೃಷ್ಣನಿಗೆ ತಿಳಿದಿದೆ. ಹಾಗೆ ಮೂರುಬಾರಿ ಮಾಡಿದಾಗ ತಾನು ಒಂದುಬಾರಿ ಭೂಮಿಮೇಲೆ ಧರ್ಮಗಳನ್ನು ತಿಳಿಸಿದಂತಾಗುವುದು. ಆದ್ದರಿಂದ ತನ್ನ ಪ್ರಣಾಳಿಕೆಯನ್ನು ಅಥವಾ ಪಥಕವನ್ನು ಮೊದಲೇ ತಿಳಿಸಿದಂತೆ ಆಧಾರಕ್ಕಾಗಿ, ಬೇಟೆಗಾರನಿಗೆ ತನ್ನ ಎರಡನೆಯ ಬರುವಿಕೆಯನ್ನು, ಮೂರನೆಯ ಬರುವಿಕೆಯನ್ನು ಕುರಿತಾದ ಸಮಾಚಾರವನ್ನು ತಿಳಿಸಿ ಹೋಗಿದ್ದಾನೆ. ಆ ಸಮಾಚಾರದಿಂದ ಬೇಟೆಗಾರನಿಗೆ ಯಾವ ಅವಶ್ಯವಿಲ್ಲ. ಆದರೂ ಕೃಷ್ಣನು ತನ್ನ ಮರಣಕಾಲದಲ್ಲಿ ಹೇಳಿದ್ದಾನೆ. ಎರಡನೆಯಬಾರಿ ಬಂದಾಗ ಈ ಸಮಾಚಾರವನ್ನು ಹೇಳಿದರೇ ಯಾರೂ ನಂಬುವುದಿಲ್ಲ. ಕೃಷ್ಣನ ಹೆಸರನ್ನು ಹೇಳಿಕೊಂಡು ಯೇಸು ದೊಡ್ಡವನೆಂದು ಅನಿಸಿಕೊಂಡಿದ್ದಾನೆಂದು ಯಾರಾದರೂ ಹೇಳುತ್ತಾರೆ. ಉದಾಹರಣೆಗೆ ಈಗ ನಮಗೆ ತಿಳಿದಿರುವ ಒಬ್ಬ ಉದ್ಯೋಗಸ್ಥ ನಾನು ಹಿಂದಿನ ಜನ್ಮದಲ್ಲಿ ಮಹಾತ್ಮಗಾಂಧೀ ಎಂದು ಹೇಳಿಕೊಂಡರೇ ಯಾರೂ ನಂಬುವುದಿಲ್ಲ. ಆ ಉದ್ಯೋಗಿ ಹೇಳಿದಂತೆ, ಆತನು ಹೋದ ಜನ್ಮದಲ್ಲಿ ನಿಜವಾಗಿ ಗಾಂಧೀನೇ ಆಗಿದ್ದರೂ ಯಾರೂ ನಂಬುವ ಸ್ಥಿತಿಯಲ್ಲಿ ಇರುವುದಿಲ್ಲ. ಮೇಲಾಗಿ ಆ ಮಾತನ್ನು ಹೇಳುವುದರಿಂದ ಇವನು ತನ್ನ ಅಧಿಕಾರಿಗಳಬಳಿ ಗೌರವವನ್ನು ಸಂಪಾದಿಸಿಕೊಳ್ಳುವುದಕ್ಕೆ ಹಾಗೆ ಸುಳ್ಳು ಹೇಳುತ್ತಿದ್ದಾನೆಂದು ಅನ್ನುತ್ತಾರೆ. ಹಾಗಲ್ಲದೆ ಗಾಂಧೀ ಬದುಕಿದ್ದಾಗ, ಮರಣಿಸುವ ಮೊದಲೇ ಮುಂಬರುವ ಜನ್ಮದಲ್ಲಿ ಇಂತಹ ವ್ಯಕ್ತಿಯಾಗಿ ಹುಟ್ಟಿ, ಇಂತಹ ಉದ್ಯೋಗವನ್ನು ಮಾಡುತ್ತೇನೆಂದು ಹೆಳಿದ್ದರೇ ಪ್ರಸ್ತುತ ಕಾಲದಲ್ಲಿ ಆ ವ್ಯಕ್ತಿ ಆ ಉದ್ಯೋಗಿಯಾಗಿ ಇದ್ದಾಗ, ಯಾರಾದರೂ ಈತ ಇಂತಹ ಗಾಂಧೀ ಎಂದು ಗುರುತಿಸಬಲ್ಲರು ಮತ್ತು ಗೌರವದಿಂದ ನೋಡಬಲ್ಲರು.

ಏನಾದರೂ ನಡೆಯುವ ಮೊದಲು ಹೇಳಿದರೇ ಹೇಳಿದವನಿಗೆ ನಡೆದ ಕಾರ್ಯಕ್ಕೆ ಬೆಲೆ ಇರುತ್ತದೆ. ಹಾಗಲ್ಲದೆ ನಡೆದ ನಂತರ ಹೇಳಿದರೇ ನಡೆದ ಕೆಲಸಕ್ಕಾಗಲೀ, ಹೇಳಿರುವ ವ್ಯಕ್ತಿಗಾಗಲೀ ಬೆಲೆ ಇರುವುದಿಲ್ಲ. ಆದ್ದರಿಂದ ಕೃಷ್ಣನು ಮುಂದೆ ನಡೆಯುವುದನ್ನು ಕುರಿತು ಮೊದಲೇ ಹೇಳಿದ್ದಾನೆ. ಆ ಬೆಲೆಯುಳ್ಳ ಸಮಾಚಾರವನ್ನು ಕೇಳಿಸಿಕೊಂಡ ವ್ಯಕ್ತಿ ಆಗಲೇ ಹೊರಗೆ ಹೇಳದೆಹೋದರೂ, ನಂತರ ಹೇಳುವುದರಿಂದ ಕೃಷ್ಣನು ಹೇಳಿರುವ ಸಮಾಚಾರಕ್ಕೆ ಬೆಲೆ ಸಿಕ್ಕಿದೆ. ಕೃಷ್ಣನು ಬದುಕಿದ್ದಾಗ ಹೇಳಿರುವ ಗೀತೆಯಲ್ಲಿ, **"ನಾನು ಧರ್ಮಗಳನ್ನು ಸಂಸ್ಥಾಪನೆ ಮಾಡುವುದಕ್ಕೆ ಯುಗಯುಗದಲ್ಲಿ, ನನ್ನನ್ನು ನಾನು ಸೃಷ್ಠಿಸಿಕೊಂಡು ಬರುತ್ತೇನೆಂದು"** ಹೇಳಿದ್ದಾನೆ. ಹಾಗೆಯೇ ಯೇಸುವಾಗಿ ಬಂದ ಸಮಯದಲ್ಲಿ ಕೂಡಾ ನಂತರ ನಾನು ಬರುತ್ತೇನೆಂದು ಹೇಳಿದ್ದಾನೆ. ಕೃಷ್ಣನಾಗಿ ಬಂದ ಶಕ್ತಿ ಯೇಸುವಾಗಿ ಬರುತ್ತೇನೆಂದು ಭಗವದ್ಗೀತೆಯಲ್ಲೂ, ಯೇಸುವಾಗಿ ಬಂದ ವ್ಯಕ್ತಿ ಆದರಣಕರ್ತ ನಾಗಿ ಇಂತಹ ಅಡ್ರಸ್‌ನಲ್ಲಿ ಬರುತ್ತೇನೆಂದು ಬೈಬಲ್‌ನಲ್ಲಿಯೂ ಹೇಳಲಿಲ್ಲ. ಮುಖ್ಯವಾಗಿ ಈ ಕಾರಣದಿಂದ ಕೃಷ್ಣನ ಭಕ್ತರಾದವರು ಯೇಸುನನ್ನು, ಯೇಸು ಭಕ್ತರಾಗಿರುವವರು ಕೃಷ್ಣನನ್ನು ನಂಬದೇ ಇದ್ದಾರೆ. ಕೃಷ್ಣನನ್ನು, ಯೇಸುನು ಬೇರೆಬೇರೆ ವ್ಯಕ್ತಿಗಳಾಗಿ ಲೆಕ್ಕಿಸಿ ಕೃಷ್ಣನನ್ನು ಕ್ರೈಸ್ತರು, ಯೇಸುನನ್ನು ಹಿಂದೂಗಳು ಅಸೂಯೆಯಿಂದ ದೂಷಿಸುತ್ತಿದ್ದಾರೆ. ಇಬ್ಬರ ಎರಡು ಮತಗಳನ್ನು ಸೃಷ್ಠಿಸಿಕೊಂಡು ಮತಗಳ ಮಬ್ಬು ಗತ್ತಲಲ್ಲಿ ಒಂದು ಮತಕ್ಕೆ ಮತ್ತೊಂದು ಮತ ವಿರೋಧವೆನ್ನುವಂತೆ ಪ್ರವರ್ತಿಸುತ್ತಿದ್ದಾರೆ. ಇದೆಲ್ಲದಕ್ಕು ಕಾರಣ ಕೃಷ್ಣ ಎಂಬ ಹೆಸರಿನಿಂದ ಐದುಸಾವಿರದ ನೂರ ಹದಿನೇಳು (5117) ವರ್ಷಗಳ ಹಿಂದೆ ಬಂದ ವ್ಯಕ್ತಿಯೇ, ಎರಡುಸಾವಿರದ ಹದಿನಾರು (2016) ವರ್ಷಗಳ ಕೆಳಗೆ ಯೇಸುವಾಗಿ ಬಂದಿದ್ದಾನೆಂದು ಯಾರೂ ಗುರುತಿಸಲಾರದೇ ಹೋಗಿದ್ದಾರೆ. ಈಗ ನಾನು ಹೇಳುವ ಈ ಸಮಾಚಾರ ಕೆಲವರಿಗೆ ಕ್ರೈಸ್ತರಿಗೆ ಇಷ್ಟವಿಲ್ಲದೆ ಹೋಗಬಹುದು. ಹಾಗೆಯೇ ಸ್ವಲ್ಪಜನ ಹಿಂದೂಗಳಿಗೂ ಕೂಡಾ ನನ್ನ ಮೇಲೆ ಕೋಪ ತರಿಸುವುದು. ಆದರೂ ದೇವರ ವಿಷಯವನ್ನು ತಿಳಿದು, ಸತ್ಯವನ್ನು ಮುಚ್ಚಿಟ್ಟು ಹೊರಗೆ ಹೇಳದೆ ಹೋದರೇ

ಅದು ಭಯಂಕರ ಪಾಪವಾಗುತ್ತದೆ. ಆದ್ದರಿಂದ ಯಾರು ಏನೆಂದುಕೊಂಡರೂ ತಪ್ಪದೇ ಹೇಳಬೇಕಾಗಿ ಬಂದಿದೆ.

"ಸತ್ಯವನ್ನು ಸಾವಿರಜನ ಅಲ್ಲವೆಂದರೂ ಅದು ಅಸತ್ಯವಲ್ಲ" ಎಂಬ ಸೂತ್ರವನ್ನು ಅನುಸರಿಸಿ ನೋಡಿದರೇ, ಎಷ್ಟುಜನ ಅಲ್ಲ ಇಲ್ಲ ಎಂದರೂ ಸತ್ಯವು ಜೀವಂತವಾಗಿಯೇ ಇರುತ್ತದೆ. ಕೊನೆಗೆ ಯಾರಾದರೂ ಸತ್ಯವನ್ನು ಒಪ್ಪಿಕೊಳ್ಳದೇ ತಪ್ಪುವುದಿಲ್ಲ. ಕೃಷ್ಣನು ಯೇಸುವಾಗಿ ಬಂದಿದ್ದಾನೆಂದು ಹೇಳುವುದು ಸತ್ಯ, ಆದಕಾರಣ ಆ ಮಾತನ್ನು ಆಲೋಚಿಸಿ ನೋಡಿದರೇ ಯಾರಿಗಾದರೂ ಸತ್ಯವಾಗಿ ಕಾಣಿಸುವುದು. ಕೃಷ್ಣನ ಜೀವನವು ಕಳೆದುಹೋಗಿ 5117 ವರ್ಷಗಳಾಗಿದೆ. ಹಾಗೆಯೇ ಯೇಸು ಜೀವನವು ಕಳೆದುಹೋಗಿ ಇಲ್ಲಿಗೆ 2016 ವರ್ಷಗಳಾಗಿದೆ. ಇಬ್ಬರ ಜೀವನಗಳು ಕಳೆದುಹೋಗಿರುವವೇ ಆದಕಾರಣ ಕಳೆದಿರುವವರ ಚರಿತ್ರೆಯನ್ನು ಯಾರೂ ಇಲ್ಲವೆಂದು ಹೇಳಲಾರರು. ಕೃಷ್ಣನು ಹುಟ್ಟಿದ್ದಾನೆ, ಹಾಗೆಯೇ ಯೇಸು ಹುಟ್ಟಿದ್ದಾನೆ. ಯಾರಿಗಾದರೂ ಜೀವನದಲ್ಲಿ ಜನನ ಮತ್ತು ಮರಣಗಳು ಎರಡು ಮುಖ್ಯವಾದ ಘಟ್ಟಗಳು. ಈಗ ಮುಖ್ಯ ಘಟ್ಟವಾದ ಕೃಷ್ಣನ ಜನ್ಮವನ್ನು, ಯೇಸು ಜನ್ಮವನ್ನು ಗಮನಿಸಿ ನೋಡೋಣ. ಕೃಷ್ಣನು ಹಳೆಯದಾದ ಸೆರೆಮನೆಯಲ್ಲಿ, ಅಶುಭ್ರವಾದ ಸ್ಥಳದಲ್ಲಿ, ತಾಯಿ ಪಕ್ಕದಲ್ಲಿ ತಂದೆ ಹೊರತು ಯಾರೂ ಇಲ್ಲದ ದೀನಸ್ಥಿತಿಯಲ್ಲಿ ಹುಟ್ಟಿದ್ದಾನೆ. ಯೇಸು ಕೂಡಾ ಹಳೆಯದಾದ ಪಶುಗಳಶಾಲೆಯಲ್ಲಿ, ಅಶುಭ್ರವಾದ ಸ್ಥಳದಲ್ಲಿ, ತಾಯಿ ಪಕ್ಕದಲ್ಲಿ ತಂದೆ ಹೊರತು ಯಾರೂ ಇಲ್ಲದ ದೀನಸ್ಥಿತಿಯಲ್ಲಿ ಹುಟ್ಟಿದ್ದಾನೆ. ಜೀವನದವೊಂದು ಪ್ರಾರಂಭ ಘಟ್ಟದಲ್ಲಿ ನಡೆದ ವಿಧಾನವನ್ನು ಇತ್ತ ಹಿಂದೂಗಳು, ಅತ್ತ ಕ್ರೈಸ್ತರು ಯುಕ್ತಿಯನ್ನುಪಯೋಗಿಸಿ ಯೋಚಿಸಿದರೇ ಕೃಷ್ಣನು, ಯೇಸು ಇಬ್ಬರೂ ಒಂದೇ ಎನ್ನುವುದಕ್ಕೆ ಮೊದಲಿಗೇ ಸಾಕ್ಷಿ ದೊರೆಯುತ್ತಿದೆ. ನಂತರ ನೋಡಿದರೇ ಕೃಷ್ಣನು ಹುಟ್ಟುವುದು ಅಪಾಯದ ಸಮಯ, ಹಾಗೆಯೇ ಯೇಸು ಹುಟ್ಟುವುದು ಕೂಡಾ ಅಪಾಯದ ಸಮಯವೇ. ಕೃಷ್ಣನು ಹುಟ್ಟಿದ್ದಾನೆಂದು ತಿಳಿಯುತ್ತಲೇ ಆತನನ್ನು ಕೊಲ್ಲುವುದಕ್ಕೆ ಆ ದೇಶದರಾಜ ಸಿದ್ಧವಾಗಿದ್ದಾನೆ.

ಹಾಗೆಯೇ ಯೇಸು ಹುಟ್ಟಿದ್ದಾನೆಂದು ತಿಳಿಯುತ್ತಲೇ ಆತನನ್ನು ಕೊಲ್ಲುವುದಕ್ಕೆ ಆ ದೇಶದ ರಾಜ ಸಿದ್ಧವಾಗಿದ್ದಾನೆ. ಕೃಷ್ಣನು ಹುಟ್ಟಿದ ಕೂಡಲೇ ಸ್ವಲ್ಪಹೊತ್ತಿಗೆ ಹುಟ್ಟಿದ ಕಡೆ ಇಲ್ಲದಂತೆ ತಂದೆಯಾಗಿದ್ದ ವಸುದೇವನು ಪಕ್ಕದ ಪ್ರಾಂತಕ್ಕೆ ಕರೆದುಕೊಂಡು ಹೋದನು. ಹಾಗೆಯೇ ಯೇಸು ಹುಟ್ಟಿದ ಸ್ವಲ್ಪಹೊತ್ತಿಗೆ ಆತನ ತಂದೆಯಾಗಿದ್ದ ಯೋಸೆಪು, ಹುಟ್ಟಿದಕಡೆ ಇಲ್ಲದಂತೆ ಪಕ್ಕದ ಪ್ರಾಂತ್ಯಕ್ಕೆ ಕರೆದುಕೊಂಡು ಹೋದನು. ಕೃಷ್ಣನಾಗಲೀ, ಯೇಸುವಾಗಲೀ ಇಬ್ಬರೂ ರಾತ್ರಿ ಹೊತ್ತೇ ಹುಟ್ಟಿದ್ದಾರೆ. ರಾತ್ರಿಹೊತ್ತು ಹುಟ್ಟಿರುವವರು ಆ ರಾತ್ರಿಗೇ ಹುಟ್ಟಿದ ಸ್ಥಳದಲ್ಲಿ ಇಲ್ಲದಂತೆ ಹೋಗಿ ಅಲ್ಲಿಗೆ ದೂರವಾಗಿ ಸ್ವಲ್ಪಕಾಲ ಅಜ್ಞಾತವಾಗಿ ಬೆಳೆದಿದ್ದಾರೆ. ಕೃಷ್ಣನು ಯೇಸು ಇಬ್ಬರು ಒಬ್ಬರೇ ಎಂದು ತಿಳಿಯುವುದಕ್ಕೆ ಒಂದೇ ಹೋಲಿಕೆಯಿರುವ ಸಂಘಟನೆಗಳು ಅವರು ಹುಟ್ಟಿದದಿನ ಸ್ಥಳಮಾಡಿಕೊಂಡಿವೆ. ಸ್ವಲ್ಪ ಬುದ್ಧಿವಂತಿಕೆಯನ್ನು ಉಪಯೋಗಿಸಿ ನೋಡಿದರೂ, ಅವರಿಬ್ಬರ ಜನನ ರಹಸ್ಯವು ತಿಳಿದುಹೋಗುತ್ತದೆ. ಅವರಿಬ್ಬರು ಒಬ್ಬರಲ್ಲ ಎನ್ನುವುದಕ್ಕೆ ಅವಕಾಶವಿಲ್ಲದೇ, ಅವರಿಬ್ಬರ ಜನ್ಮಗಳು ಒಂದೇ ವಿಧವಾಗಿ ನಡೆದಿವೆ.

ನಂತರ ಕೃಷ್ಣನಿಗೆ ಮೂವತ್ತು ವರ್ಷಗಳ ವಯಸ್ಸಿನಲ್ಲಿ ಆತನ ಜೀವನದಲ್ಲಿ ಹೇಳಿಕೊಳ್ಳುವಂತಹ ಬದಲಾವಣೆ ಬಂದಿದೆ. ಹಾಗೆಯೇ ಯೇಸುಗೆ ಕೂಡಾ ಮೂವತ್ತು ವರ್ಷಗಳ ವಯಸ್ಸಿನಲ್ಲಿ ಬದಲಾವಣೆ ಕಾಣಿಸುತ್ತಿದೆ. ಮೂವತ್ತು ವರ್ಷಗಳ ವಯಸ್ಸಿನಲ್ಲಿ ಕೃಷ್ಣನು ಮಧುರೆಯನ್ನು ಬಿಟ್ಟು ದ್ವಾರಕಕ್ಕೆ ಹೋಗಿದ್ದಾನೆ. ಹಾಗೆಯೇ ಯೇಸು ಕೂಡಾ ತನಗೆ ಮೂವತ್ತು ವರ್ಷಗಳ ವಯಸ್ಸು ಬರುತ್ತಲೇ ತಾಯಿ ತಂದೆಯರನ್ನು ಬಿಟ್ಟು ಹೊರಟುಹೋದನು. ಕೊನೆಯಲ್ಲಿ ಮುಖ್ಯ ಘಟ್ಟವಾದ ಮರಣದಲ್ಲಿ ಕೃಷ್ಣನು ಗಾಯಗೊಂಡು ರಕ್ತಸೋರಿ ಮರಣಿಸಿದನು. ಹಾಗೆಯೇ ಯೇಸು ಕೂಡಾ ಗಾಯಗೊಂಡು ರಕ್ತಸೋರಿ ಮರಣಿಸಿದನು. ಕೃಷ್ಣನು ಸಾಯುವ ಸಮಯದಲ್ಲಿ ತನ್ನವರು ಯಾರೂ ಕೃಷ್ಣನ ಬಳಿಯಿಲ್ಲ. ಹಾಗೆಯೇ ಯೇಸು ಸಾಯುವಾಗ ಕೂಡಾ ಆತನಬಳಿ ತನ್ನವರು ಯಾರೂ

ಇಲ್ಲ. ಕೃಷ್ಣನು ಮರಣಿಸುವಾಗ ಆತನು ಕುಡಿಯುವುದಕ್ಕೆ ನೀರು ಕುಡಾ ಅಲ್ಲಿರಲಿಲ್ಲ. ಹಾಗೆಯೇ ಯೇಸುಗೆ ಕೂಡಾ ನೀರು ಸಿಗಲಿಲ್ಲ. ಕೃಷ್ಣನು ತನ್ನ ಕಾಲಿಗೆ ಬಲವಾಗಿ ನಾಟಿಕೊಂಡ ಬಾಣದಿಂದ ಮರಣಿಸಿದನು. ಹಾಗೆಯೇ ಯೇಸು ತನ್ನ ಕಾಲುಗಳಿಗೆ ಬಲವಾಗಿ ನಾಟಿಕೊಂಡ ಮೊಳೆಯಿಂದ ಸತ್ತುಹೋದನು. ಈ ವಿಧವಾಗಿ ಕೃಷ್ಣನ ಮತ್ತು ಯೇಸು ಜನನ ಮರಣಗಳು ಒಂದೇ ಸ್ಥಿತಿಯಲ್ಲಿ ನಡೆದುಹೋಗಿವೆ. ಭೂಮಿಮೇಲೆ ಆ ವಿಧವಾಗಿ ಯಾರಿಗೂ ನಡೆಯದೆ, ಕೇವಲ ಇವರಿಬ್ಬರ ವಿಷಯಗಳಲ್ಲಿಯೇ ಹಾಗೆ ನಡೆಯುವುದು, ಇವರಿಬ್ಬರು ವಿಶೇಷವಾಗಿ ಇಬ್ಬರು ಪ್ರವಕ್ತರಾಗಿ ಇರುವುದರಿಂದ ಇವರ ಜನನ ಮರಣಗಳನ್ನು ವಿಶ್ಲೇಶಿಸಿ ನೋಡಬೇಕಾಗಿ ಬಂದಿದೆ. ಹಾಗೆ ನೋಡಿದರೇ ಇವರಿಬ್ಬರು ಒಬ್ಬರೇ ಎಂದು ತಿಳಿಯದವರು ಕೂಡಾ ತಿಳಿದುಕೊಳ್ಳುವಂತೆ ನಡೆದಿದೆಯೆಂದು ತಿಳಿಯುತ್ತಿದೆ. ಕೃಷ್ಣನು ಸತ್ತುಹೋಗುತ್ತಾ ಹೇಳಿರುವ ಮಾತು ಸತ್ಯವೆಂದು ತಿಳಿಯುವುದಕ್ಕೆ ಯೇಸು ಜನನ, ಮರಣ ಎರಡೂ ಕೃಷ್ಣನ ಜನನ ಮರಣಗಳೊಂದಿಗೆ ಸರಿತೂಗುವಂತೆ ನಡೆದಿದೆ. ಕಾಣಿಸದೆ ಇರುವುದನ್ನು ನಂಬುವುದಿಲ್ಲ. ಕಾಣಿಸುವುದನ್ನೇ ನಂಬುತ್ತೇವೆನ್ನುವ ಹೇತುವಾದಿಗಳಿಗೆ, ಕಾಣಿಸದಿರುವುದು ಅಸತ್ಯ, ಕಾಣಿಸುವುದೇ ಸತ್ಯವೆನ್ನುವ ನಾಸ್ತಿಕವಾದಿಗಳು ಕೂಡಾ ಒಪ್ಪಿಕೊಳ್ಳುವಹಾಗೆ ಕಾಣಿಸುವ ಸಂಘಟನೆಗಳಾಗಿಯೇ ಕೃಷ್ಣನ, ಯೇಸುವಿನ ಜನನ ಮರಣಗಳು ನಡೆದಿವೆ.

ಭೌತಿಕವಾಗಿ ಕೃಷ್ಣನು ಯೇಸುವಾಗಿ ಹುಟ್ಟಿದ್ದಾನೆಂದೂ, ಕೃಷ್ಣನಾಗಲೀ ಯೇಸುವಾಗಲೀ ಇಬ್ಬರು ಒಬ್ಬರೇ ಎಂದು, ಆ ಒಬ್ಬರು ದೈವದಲ್ಲಿರುವ ಶಕ್ತಿಯೇ ಎಂದು, ಆ ದೈವಶಕ್ತಿಯೇ, ಒಂದು ವ್ಯಕ್ತಿಯಾಗಿ, ಅದು ಎರಡು ಕಾಲಗಳಲ್ಲಿ, ಎರಡು ಆಕಾರಗಳಲ್ಲಿ, ಎರಡು ಹೆಸರುಗಳಲ್ಲಿ ಚಲಾವಣೆ ಆಗಿದೆಯೆಂದು ತಿಳಿಯುತ್ತಿದೆ. ಒಂದೇ ದೈವಶಕ್ತಿ ಧರ್ಮಗಳನ್ನು ಪೂರ್ತಿಯಾಗಿ ತಿಳಿಸುವುದಕ್ಕೆ, ಧರ್ಮಗಳು ಎಲ್ಲರಿಗೂ ತಿಳಿಸುವುದಕ್ಕೆ ಮೊದಲು ಒಬ್ಬ ಕೃಷ್ಣನಾಗಿ ಹುಟ್ಟಿ, ನಂತರ ಎರಡನೆಯಬಾರಿ ಯೇಸುವಾಗಿ ಹುಟ್ಟಬೇಕಾಗಿ ಬಂದಿದೆ.

ಕಾಣಿಸುವುದನ್ನೇ ನಂಬುವ ಪ್ರಜೆಗಳು, ಬೇರೆಬೇರೆಯಾಗಿ ಕಾಣಿಸುವ ಕೃಷ್ಣನನ್ನು, ಯೇಸುನನ್ನು ಬೇರೆಬೇರೆಯಾಗಿಯೇ ಭಾವಿಸಿಕೊಳ್ಳುತ್ತಿದ್ದಾರೆ. ಕೃಷ್ಣನಾಗಲೀ, ಯೇಸುವಾಗಲೀ ಹೇಳದ ಮತಗಳನ್ನು ಮನುಷ್ಯರು ಏರ್ಪಡಿಸಿಕೊಂಡು, ಇದು ಕೃಷ್ಣನದು, ಇದು ಯೇಸುದು ಎನ್ನುತ್ತಿದ್ದಾರೆ. ಅಜ್ಞಾನಿಗಳ ದೃಷ್ಟಿಯಲ್ಲಿ ಕೃಷ್ಣನು, ಯೇಸು ಇಬ್ಬರು ಬೇರೆಬೇರೆ ವ್ಯಕ್ತಿಗಳಾದರೂ, ಜ್ಞಾನಿಗಳ ದೃಷ್ಟಿಯಲ್ಲಿ ಇಬ್ಬರು ಒಂದೇ ಶಕ್ತಿಯಾಗಿರುವ ವ್ಯಕ್ತಿಗಳೆಂದು ತಿಳಿಯುತ್ತಿದೆ. ಇಂದಿನ ಕಾಲದಲ್ಲಿ ಜ್ಞಾನಿಗಳ ಸಂಖ್ಯೆ ಕಡಿಮೆಯಾಗಿ, ಅಜ್ಞಾನಿಗಳ ಸಂಖ್ಯೆ ಬೆಳೆದು ಹೋಗಿದೆ. ಅಜ್ಞಾನಿಗಳ ಸಂಖ್ಯೆಯನ್ನು ತಗ್ಗಿಸಿ, ಜ್ಞಾನಿಗಳ ಸಂಖ್ಯೆಯನ್ನು ಬೆಳೆಸುವುದಕ್ಕೆ ಎತ್ತಿರುವ ಪ್ರಾರಂಭ ಅವತಾರವೇ ಶ್ರೀಕೃಷ್ಣನದು. ಹಾಗೆ ಪ್ರಾರಂಭವಾದ ಅವತಾರವು ಮೂರು ಅವತಾರಗಳೊಂದಿಗೆ ಮುಕ್ತಾಯವಾಗುತ್ತದೆ. ಇಂದಿಗೆ ಪರಮಾತ್ಮ ಶಕ್ತಿ ಮೊದಲ ಅವತಾರವಾಗಿ ಕೃಷ್ಣನ ರೂಪದಲ್ಲಿ ಬಂದು ಧರ್ಮಗಳನ್ನು ತಿಳಿಸಿದೆ. ಭೂಮಿಮೇಲೆ ಮನುಷ್ಯರಲ್ಲಿ ಅಜ್ಞಾನವನ್ನು ತೆಗೆದುಹಾಕಿ ಜ್ಞಾನವನ್ನು ತಿಳಿಸುವ ಕಾರ್ಯದಲ್ಲಿ ಮೊದಲ ಭಾಗವು ದ್ವಾಪರಯುಗದಲ್ಲಿ ನಡೆದಿದೆ. ಮೂರು ಭಾಗಗಳಲ್ಲಿ ಒಂದು ಭಾಗ ಕೃಷ್ಣನ ರೂಪದಲ್ಲಿ ನೆರವೇರಿದೆ. ಎರಡನೆಯ ಭಾಗವು ಕೂಡಾ ಯೇಸು ರೂಪದಲ್ಲಿ ನೆರವೇರಿದೆ. ಇಲ್ಲಿಗೆ ಎರಡು ಭಾಗಗಳ ಕಾರ್ಯವು ಪೂರ್ತಿಯಾಗಿದೆ. ಎರಡು ಭಾಗಗಳಲ್ಲಿ ಧರ್ಮಗಳು ಹೇಳಲ್ಪಟ್ಟಿವೆ. ಇಲ್ಲಿಗೆ ಪ್ರತ್ಯಕ್ಷವಾಗಿ ಧರ್ಮಸಂಸ್ಥಾಪನೆ ಕಾರ್ಯವು ಎರಡು ಭಾಗಗಳಾಗಿ, ಎರಡು ದೇಶಗಳಲ್ಲಿ, ಎರಡು ಶರೀರಗಳ ಮೂಲಕ, ಎರಡು ಹೆಸರುಗಳು ಹೊಂದಿರುವ ವ್ಯಕ್ತಿಗಳ ಮೂಲಕ ನಡೆದಿದ್ದರೂ ನಾವು ಜ್ಞಾನಿಗಳು ಎಂದುಕೊಳ್ಳುವವರು ಯಾರೂ ಸಹ ಇಷ್ಟು ದೊಡ್ಡ ಮಹತ್ಕಾರ್ಯವನ್ನು ಗುರುತಿಸಲಾರದೆ ಹೋಗಿದ್ದಾರೆ.

ಒಂದು ಗೆರೆ ಮೂರು ಭಾಗಗಳಿರುವಹಾಗೆ, ತ್ರೈತದೊಂದಿಗೆ ಕೂಡಿರುವ ಧರ್ಮಗಳು, ತ್ರಿ ಭಾಗಗಳಾಗಿ, ತ್ರಿ ವ್ಯಕ್ತಿಗಳ ಮೂಲಕ ಬೋಧಿಸಲ್ಪಡುವುದು. ಬೋಧಿಸುವವನು ಒಬ್ಬನೇ ಎಂದು, ಬೋಧಿಸಲ್ಪಡುವವು ಒಂದೇ ದೇವರ

ಧರ್ಮಗಳೆಂದು ಜ್ಞಾಪಕವಿಟ್ಟುಕೊಳ್ಳಬೇಕು. ದೈವ ಧರ್ಮಗಳನ್ನು ಪೂರ್ತಿಯಾಗಿ ಬೋಧಿಸುವುದಕ್ಕೆ ಕೆಲವು ವರ್ಷಗಳ ಕಾಲ ಅವಶ್ಯ. ಇಲ್ಲಿಗೆ ಮೊದಲು ಕೃಷ್ಣನು ಬೋಧಿಸಿದಾಗಿನಿಂದ ಸುಮಾರು ಐದುಸಾವಿರ ವರ್ಷಗಳು ಕಳೆದುಹೋಗಿವೆ. ಹಾಗೆಂದು ಐದುಸಾವಿರ ವರ್ಷಗಳೂ ಧರ್ಮಗಳು ಬೊಧಿಸಲ್ಪಡಲಿಲ್ಲ. ದ್ವಾಪರಯುಗ ಅಂತ್ಯದಲ್ಲಿ ಕೃಷ್ಣನ ಮೂಲಕ ಕೆಲವು ನಿಮಿಷಗಳ ಕಾಲ ಧರ್ಮಗಳು ಬೋಧಿಸಲ್ಪಟ್ಟಿವೆ. ಅದು ಮೊದಲಭಾಗವಾದಾಗ, ಅಂದಿನಿಂದ ಮೂರು ಸಾವಿರವರ್ಷಗಳ ನಂತರ ಯೇಸು ಮೂಲಕ ಮೂರು ವರ್ಷಗಳ ಕಾಲ ಧರ್ಮಗಳು ಬೊಧಿಸಲ್ಪಟ್ಟಿವೆ. ಯೇಸು ಬೋಧಿಸಿರುವುದು ಎರಡನೆಯ ಭಾಗವಾಗಿರುವಾಗ, ಅಂದಿನಿಂದ ಇಂದಿನವರೆಗು ಎರಡುಸಾವಿರ ವರ್ಷಗಳು ಕಳೆದಿವೆ. ಮೂರನೆಯ ಭಾಗದಲ್ಲಿನ ಧರ್ಮಬೋಧ ಕೃಷ್ಣನು ಆದರ್ಶಕರ್ತನ ಮೂಲಕ ಬೋಧಿಸಲ್ಪಡುತ್ತವೆಂದು ಹೇಳಿದ್ದರೇ, ಯೇಸು ಆದರಣಕರ್ತನ ಮೂಲಕ ಬೋಧಿಸಲ್ಪಡುತ್ತವೆ ಎಂದು ತಿಳಿಸಿದ್ದಾನೆ. ಆದರಣ ಕರ್ತನಾಗಲೀ, ಅಥವಾ ಆದರ್ಶಕರ್ತನಾಗಲೀ ಯಾವಾಗ ಎಷ್ಟು ವರ್ಷಗಳಿಗೆ ಬರುತ್ತಾರೋ, ಯಾವ ದೇಶದಲ್ಲಿ ಬೋಧಿಸುತ್ತಾರೋ ಎಲ್ಲೂ ಹೇಳಲ್ಪಟ್ಟಿಲ್ಲ. ಎಂದಿಗಾದರೂ ಮೂರನೆಯ ಬೋಧಕನು ಬರುತ್ತಾನೆ, ಈ ಬಾರಿ ಪೂರ್ತಿ ಧರ್ಮಗಳನ್ನು ತಿಳಿಸುತ್ತಾನೆ. ಹಾಗೆ ಮೂರನೆಯ ಪುರುಷನೊಂದಿಗೆ ಧರ್ಮಗಳ ಪುನರುದ್ಧಾರಣೆ, ಅಧರ್ಮಗಳನ್ನು ಅಡಗಿಸುವ ಕಾರ್ಯ ಪೂರ್ತಿಯಾಗುವುದರಲ್ಲಿದೆ. ಮೂರು ಕಾಲಗಳಲ್ಲಿ, ಮೂವರು ಬೋಧಕರ ರೂಪದಲ್ಲಿ ಹೇಳಲ್ಪಡುವವು ಒಂದೇ ದೇವರ ಧರ್ಮಗಳೆಂದು ತಿಳಿಯಬೇಕು. ಮೊದಲು ಕೃಷ್ಣನು ಹೇಳಿರುವವು ಒಬ್ಬ ದೇವರ ಧರ್ಮಗಳು, ನಂತರ ಯೇಸು ಹೇಳಿರುವವು ಮತ್ತೊಬ್ಬ ದೇವರ ಧರ್ಮಗಳು ಅಲ್ಲವೇಅಲ್ಲ. ಇಬ್ಬರು ಹೇಳಿರುವವು ನಂತರ ಮುಂಬರುವ ಮೂರನೆಯವನು ಹೇಳಲಾಗುವವು, ಎಲ್ಲಾ ಒಂದೇ ದೇವರ ಧರ್ಮಗಳೆಂದು ತಿಳಿಯಬೇಕು. ಕೃಷ್ಣನು ಹೇಳಿರುವವು ಹಿಂದೂಮತ ಧರ್ಮಗಳೆಂದು, ಯೇಸು ಹೇಳಿರುವುದು ಕ್ರೈಸ್ತಮತ ಧರ್ಮಗಳೆಂದು ತಪ್ಪಾಗಿ ಕೂಡಾ ಅಂದುಕೊಳ್ಳಬಾರದು.

ಕೃಷ್ಣನಾಗಲೀ, ಯೇಸುವಾಗಲೀ ಮತಧರ್ಮಗಳನ್ನು ಬೋಧಿಸಲಿಲ್ಲ. ಅವರಿಬ್ಬರು ಬೋಧಿಸಿರುವವು ಒಂದೇ ದೇವರ ಧರ್ಮಗಳು ಮಾತ್ರವೇ ಎಂದು ಜ್ಞಾಪಕವಿಟ್ಟುಕೊಳ್ಳಬೇಕು.

ಧರ್ಮಗಳ ಪುನರುದ್ಧಾರಣೆಯ ಕಾರ್ಯವನ್ನು ಪ್ರಾರಂಭ ಮಾಡಿರುವುದು ಕೃಷ್ಣನು. ಕೃಷ್ಣನು ಬಹಳ ಬುದ್ಧಿವಂತನು. ಮೊದಲೇ ತನ್ನಲ್ಲಿರುವ, ತನಗೆ ತಿಳಿದಿರುವ, ತನ್ನ ಧರ್ಮಗಳ ಪ್ರಚಾರ ಕಾರ್ಯಕ್ರಮ ಯೋಜನೆಯನ್ನು ಯಾರಿಗೂ ಹೇಳದೆ ತನ್ನಲ್ಲೇ ನಿಗ್ರಹಿಸಿ ಇಟ್ಟುಕೊಂಡು, ಕೊನೆಗೆ ಸಾಯುವ ಮುನ್ನ ಬೇಟೆಗಾರನಿಗೆ ಹೇಳಿದ್ದಾನೆ. ಬೇಟೆಗಾರನು ಆ ವಿಷಯವನ್ನು ಯಾರಿಗೂ ಹೇಳುವುದಿಲ್ಲವೆಂದು ಕೃಷ್ಣನಿಗೆ ತಿಳಿದಿತ್ತು. ಬೇಟೆಗಾರನಿಗೆ ಹೊರತು ಯಾರಿಗೆ ಹೇಳಿದರೂ, ಅದು ಕೂಡಲೇ ಎಲ್ಲರಿಗೂ ತಿಳಿದುಹೋಗಿ, ಸ್ವಲ್ಪಕಾಲಕ್ಕೆ ಬಲಹೀನವಾದ ರಹಸ್ಯವಾಗಿ, ಕೊನೆಗೆ ತಿಳಿಯದೇ ಹೋಗುವುದೆಂದು ಕೃಷ್ಣನ ಭಾವನೆ. ಆದ್ದರಿಂದ ಜೀವನ ಕಾಲವೆಲ್ಲವು ತನ್ನಲ್ಲೇ ಮುಚ್ಚಿಟ್ಟುಕೊಂಡನು. ಎಲ್ಲಿ ಹೊಡೆದರೆ ಎಲ್ಲಿ ತಗಲುವುದೊ ಕೃಷ್ಣನಿಗೆ ಚೆನ್ನಾಗಿ ತಿಳಿದಿತ್ತು. ಆದ್ದರಿಂದಲೇ ಕೇಳದಿದ್ದರೂ ಅರ್ಜುನನಿಗೆ ಗೀತೆಯನ್ನು ಹೇಳಿದ್ದಾನೆ. ನೀನು ನನಗೆ ಪ್ರಯನಾದವನು, ಸ್ನೇಹಿತನು ಆದಕಾರಣ ನಿನಗೆ ಹೇಳುತ್ತಿದ್ದೇನೆಂದು ಅರ್ಜುನನನ್ನು ಉಬ್ಬಿಹೋಗುವಂತೆ ಮಾಡಿದನು. ವಾಸ್ತವವಾಗಿ ಕೃಷ್ಣನಿಗೆ ಅರ್ಜುನನಿಗೆ ಪ್ರಿಯನಾದವನಲ್ಲ. ಕೃಷ್ಣನಿಗೆ ನಡೆಯುವ ವಿಷಯಗಳೆಲ್ಲಾ ತಿಳಿದಿವೆ. ಮೊದಲೇ ತಿಳಿದಿರುವವನಾದ್ದರಿಂದ ಯಾರೊಂದಿಗೆ ಹೇಗೆ ಮಾತನಾಡಬೇಕೊ, ಹೇಗೆ ಮಾತನಾಡಿದರೇ ನಡೆಯುವ ಕೆಲಸಕ್ಕೆ ಸರಿಹೋಗುವುದೋ ತಿಳಿದು ಮಾತನಾಡುವವನು. ಕೃಷ್ಣನಿಗೆ ನಡೆಯುವಂತಹ ವಿಷಯಗಳು ತಿಳಿದಿವೆಯೆನ್ನುವುದಕ್ಕೆ ಆಧಾರವಾಗಿ ಗೀತೆಯಲ್ಲಿ ವಿಜ್ಞಾನಯೋಗದಲ್ಲಿ 26ನೇ ಶ್ಲೋಕದಲ್ಲಿ ಹೀಗೆ ಇದೆ.

**ಶ್ಲೋ॥26.** ***ವೇದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ ।***
***ಭವಿಷ್ಯಾಣಿಚ ಭೂತಾನಿ ಮಾಂತು ವೇದ ನಕಶ್ಚನ ॥***

**ಭಾವಾರ್ಥ:–** ಜಗತ್ತಿನಲ್ಲಿ ಸರ್ವ ಜೀವರಾಶಿಗಳಿಗೆ ನಡೆದಿರುವುದು, ನಡೆಯುತ್ತಿರುವುದು, ನಡೆಯುವ ವಿಷಯಗಳು ನನಗೆ ತಿಳಿದಿವೆ. ಆದರೇ ನಾನು ಇಂಥವನೆಂದು ಯಾರಿಗೂ ತಿಳಿದಿಲ್ಲ.

ಕೃಷ್ಣನೇ ಸ್ವತಃವಾಗಿ ಮೇಲಿನ ಶ್ಲೋಕದಲ್ಲಿ ನನಗೆ ಮೂರುಕಾಲಗಳು ತಿಳಿದಿದೆ ಎಂದಿದ್ದಾನೆ. ಆದರೇ ಆತನು ಅಂತಹ ದೊಡ್ಡವನೆಂದು, ಆತನು ಸಾಕ್ಷಾತ್ತು ದೈವದಲ್ಲಿನ ಅಂಶವೆಂದೂ, ನಡೆಯುವಂತಹ ವಿಷಯಗಳು ಆತನಿಗೆ ತಿಳಿದಿವೆಯೆಂದು ಯಾರಿಗೂ ತಿಳಿದಿಲ್ಲ. ಜ್ಞಾನದ ಮೇಲೆ ಆಸಕ್ತಿ ಇರುವವರು ಎಷ್ಟೋಜನರು ಭೂಮಿಮೇಲೆ ಇರುವಾಗ ಜ್ಞಾನದ ಮೇಲೆ ಆಸಕ್ತಿ ಇಲ್ಲದ ಅರ್ಜುನನಿಗೆ ಗೀತೆಯನ್ನು ಹೇಳಿದ್ದಾನೆ. ಹಾಗೆ ಹೇಳಿದ್ದಾನೆಂದರೇ ಎಲ್ಲಾ ಮೊದಲೇ ತಿಳಿದಿರುವ ಕೃಷ್ಣನು ಹಾಗೆ ಹೇಳುವುದೇ ಒಳ್ಳೆಯದೆಂದು ತಿಳಿದು ಹೇಳಿರುತ್ತಾನೆ. ಹಾಗೆಯೇ ಬೇಟೆಗಾರನಿಗು ಸಹ ಹೇಳಿದ್ದಾನೆ. ಮುಂದೆ ನಡೆಯುವ ಕಾಲದಲ್ಲಿ ಏನು ನಡೆಯುವುದು ಎಂದು ಕೃಷ್ಣನಿಗೆ ತಿಳಿದಿದೆ. ಆದ್ದರಿಂದ ಎಲ್ಲವನ್ನು ಆತನು ತಿಳಿದೇ ಮಾಡಿದ್ದಾನೆಂದು ಹೇಳಬಹುದು. ಆ ಜನ್ಮ ಮುಗಿದುಹೋದ ನಂತರ ಮೂರುಸಾವಿರ ವರ್ಷಗಳಿಗೆ ತಾನೇ ಯೇಸುವಾಗಿ ಬರುತ್ತೇನೆಂದು ಕೃಷ್ಣನಿಗೆ ತಿಳಿದಿದೆ. ಆ ರಹಸ್ಯವನ್ನು ಬೇಟೆಗಾರನಿಗೆ ಹೇಳಿದರೂ, ಅದು ಹೊರಗೆ ಹರಡುವುದಿಲ್ಲವೆಂದು ಕೂಡಾ ತಿಳಿದಿದೆ. ನಂತರ ಕೊನೆಗೆ ಆ ರಹಸ್ಯ ಯಾರಿಗೆ ತಿಳಿಯುತ್ತದೋ ಸಹ ಆತನಿಗೆ ತಿಳಿದಿದೆ. ಐದುಸಾವಿರ ವರ್ಷಗಳಿಗೆ ತನ್ನ ಮಾತು ಹೊಸದಾಗಿ ತಿಳಿದಾಗ ತಿಳಿದಿರುವವರು ಗ್ರಂಥ ರೂಪದಲ್ಲಿ ಈ ವಿಷಯವನ್ನು ಬರೆಯುತ್ತಾರೆಂದು ಕೂಡಾ ತಿಳಿದಿದೆ. ಕೃಷ್ಣನು ಹೇಳಿರುವ ರಹಸ್ಯ ಯೇಸು ಬಂದು ಹೋದ ನಂತರ ತಿಳಿಯುವುದೇ ಒಳ್ಳೆಯದೆಂದು ಕೃಷ್ಣನು ಅಂದುಕೊಂಡನು. ಕೃಷ್ಣನು ಸ್ವತಃವಾಗಿ ಯೇಸುವಾಗಿ ಜನ್ಮಿಸಿ ಅಲ್ಲಿ ಕೂಡಾ ತಾನು ಎಂಥವನಾಗಿರುವುದು, ಯಾರಾಗಿರುವುದು, ಯಾರ ಊಹೆಗೂ ಕೂಡಾ ದೊರೆಯದೇ ಮಾಡಿದ್ದಾನೆ. ಹಾಗೆ ಮಾಡುವುದಕ್ಕೆ ಕಾರಣವೇನೆಂದರೇ! ಕೃಷ್ಣ, ಯೇಸು ಪಾತ್ರಗಳಲ್ಲಿ ಕೇವಲ ದೈವಧರ್ಮಗಳನ್ನು

ಹೇಳಿಹೋಗುವುದೇ ಅಲ್ಲಿನ ಉದ್ದೇಶ. ಅಲ್ಲಿ ಆತನು ಯಾರೆನ್ನುವುದು ತಿಳಿಯುವ ಅವಶ್ಯವಿಲ್ಲ.

ನಡೆದುಹೋಗಿರುವವು, ನಡೆಯುತ್ತಿರುವವು, ನಡೆಯುವವು ತಿಳಿದಿರುವ ಕೃಷ್ಣನು ತಾನು ಯಾರಾಗಿರುವುದು ಕೇವಲ ಜ್ಞಾನಿಗಳಿಗೆ, ಯೋಗಿಗಳಿಗೆ ಮಾತ್ರವೇ ತಿಳಿಯಬೇಕೆಂದೂ, ಅಜ್ಞಾನಿಗಳಿಗೆ ಸ್ವಲ್ಪವಾದರೂ ತಿಳಿಯಬಾರದು ಎಂದು ಕೊಂಡಿದ್ದಾನೆ. ಆದ್ದರಿಂದ ಕೃಷ್ಣನು ಯಾರೋ, ಅಜ್ಞಾನಿಗಳಾದವರಿಗೆ ಯಾರಿಗೂ ತಿಳಿಯದೇ ಹೋಗಿದೆ. ಕೃಷ್ಣನು ತನ್ನ ಉಪಾಯವನ್ನು ಜ್ಞಾನಿಗಳಿಗೆ, ಯೋಗಿಗಳಿಗೆ ಮಾತ್ರ ತಿಳಿಯುವಂತೆ ಮಾಡಿದ್ದಾನೆ. ಜ್ಞಾನಿಗಳಿಗೆ, ಯೋಗಿಗಳಿಗೆ ಯೇಸುವಾಗಿ ಬರುವ ಮೊದಲೇ ತಿಳಿದುಹೋದರೇ ಜ್ಞಾನಿಗಳಿಂದ, ಯೋಗಿಗಳಿಂದ ತನ್ನ ಕೆಲಸಕ್ಕೆ ಆತಂಕ ಏರ್ಪಡುವುದೆಂದು, ತಾನು ರಚಿಸಿಕೊಂಡ ಉಪಾಯದ ಪ್ರಕಾರ ಯೇಸುವಾಗಿ ತನ್ನ ಜೀವನವು ಸಾಗುವುದಿಲ್ಲವೆಂದು ತಿಳಿದು, ಯೇಸು ಹೋದ ನಂತರ ಎರಡುಸಾವಿರ ವರ್ಷಗಳಿಗೆ ತನ್ನ ಜನ್ಮಗಳ ರಹಸ್ಯವನ್ನು ತಿಳಿಯುವಂತೆ ಮಾಡಿದ್ದಾನೆ. ಹಾಗೆ ಮಾಡುವುದರಿಂದ ಕೃಷ್ಣನಿಗೆ ಮೂರನೆಯ ಬರುವಿಕೆ, ಯೇಸುವಿಗೆ ಎರಡನೆಯ ಬರುವಿಕೆಯಾದ ಆದರಣಕರ್ತ ವಿಷಯವು ಜ್ಞಾನಿಗಳಿಗೆ, ಅಜ್ಞಾನಿಗಳಿಗೆ ತಿಳಿದರೂ ಪರವಾಗಿಲ್ಲವೆಂದುಕೊಂಡನು. ಕೃಷ್ಣನ ಮೊದಲಬರುವಿಕೆಯಲ್ಲಿ ಆತನು ದೊಡ್ಡ ಧನಿಕನಾಗಿ ಬಂದಿದ್ದಾನೆ. ಆತನಿಗೆ ಎರಡನೆಯ ಬರುವಿಕೆಯಲ್ಲಿ ಯೇಸು ಬಹಳ ಬಡವನಾಗಿ, ಕಟ್ಟಿಕೊಳ್ಳುವುದಕ್ಕೆ ಎರಡನೆಯ ವಸ್ತ್ರವು ಕೂಡಾ ಇಲ್ಲದವನು. ಕೃಷ್ಣನು ಬಂಗಾರದ ಆಭರಣಗಳು ಧರಿಸಿ ರೇಶ್ಮೆವಸ್ತ್ರಗಳು ಕಟ್ಟಿದವನು, ಯೇಸು ಜನ್ಮದಲ್ಲಿರುವಾಗ ನೂಲಿನ ವಸ್ತ್ರವು ಕೂಡಾ ಸರಿಯಾಗಿಲ್ಲದವನಾಗಿ ಕಾಣಿಸಿದ್ದಾನೆ. ಇನ್ನು ಮೂರನೆಯ ಅವತಾರದಲ್ಲಿ ಯಾರಿಗೂ ತಿಳಿಯದಹಾಗೆ ಧನಿಕನಲ್ಲದೆ, ಬಡವನಲ್ಲದೆ ಮಧ್ಯಮ ರೀತಿಯಲ್ಲಿ ಇರುತ್ತಾನೆಂದು ತಿಳಿಯುತ್ತಿದೆ.

ಭಗವಂತನ ಮೊದಲ ಜನ್ಮದಲ್ಲಿ ಕೃಷ್ಣನು ಅರ್ಜುನನಿಗೆ ಹೇಳಿರುವ ಭಗವದ್ಗೀತೆಯಲ್ಲಿ ತಾನು ದೇವರೆಂದು ಪ್ರಕಟಿಸಿಕೊಂಡರೂ, ವಿಶ್ವರೂಪವನ್ನು

ತೋರಿಸಿದರೂ ಅದನ್ನು ಯಾರೂ ನಂಬದಂತೆ ಪ್ರವರ್ತಿಸಿದ್ದಾನೆ. ಎರಡನೆಯ ಜನ್ಮವಾದ ಯೇಸುಆಗಿ ಬಂದಾಗ ತಾನು ದೇವರು ಕಳುಹಿಸದರೇ ಬಂದಿರುವ ದೇವರ ಕುಮಾರನೆಂದು ಒಂದು ಕಡೆ ಹೇಳುತ್ತಲೇ, ಮತ್ತೊಂದು ಕಡೆ ತಾನು ದೇವರು ಇಬ್ಬರು ಒಂದೇ ಎಂಬ ಸತ್ಯವನ್ನು ಹೇಳಿದ್ದಾನೆ. ಮೂರನೆಯ ಬರುವಿಕೆಯಾದ ಯೇಸು ಹೇಳಿರುವ ಆದರಣಕರ್ತ ತಾನು ದೇವರೆಂದಾಗಲೀ, ದೇವರು ಕಳುಹಿಸಿದರೇ ಬಂದಿರುವವನೆಂದಾಗಲೀ ಸ್ವಲ್ಪವಾದರೂ ಹೇಳದೆ ಸಾಧಾರಣ ವ್ಯಕ್ತಿಯಾಗಿಯೇ ಪ್ರಕಟಿಸಿಕೊಳ್ಳುವನು. ಸಾಧಾರಣ ವ್ಯಕ್ತಿಯಾಗಿರುವ ಆದರಣಕರ್ತನನ್ನು ಕಂಡುಹಿಡಿಯುವುದಕ್ಕೆ ಅವಕಾಶವಿಲ್ಲ. ಆದರೇ ಕೃಷ್ಣನು ಆತನ ಹೆಸರನ್ನು ಕುರಿತು ಹೇಳಿದ್ದಾನೆ, ಮೂರನೆಯವನು "ಆದರ್ಶಕರ್ತ" ಎಂಬ ಹೆಸರಿನಿಂದ ಚಲಾವಣೆ ಆಗುವನೆಂದು ಹೇಳುವುದರಿಂದ ಮೂರನೆಯ ಅವತಾರವನ್ನು ಗುರುತಿಸುವುದಕ್ಕೆ ಅವಕಾಶವಿರುವುದು. ದೈವಧರ್ಮಗಳನ್ನು ತಿಳಿಸುವ ಸುದೀರ್ಘ ಕಾರ್ಯವು ಮೂರನೆಯ ಬರುವಿಕೆಯೊಂದಿಗೆ ಮುಗಿದುಹೋಗುತ್ತದೆ. ಮೂರನೆಯ ಬರುವಿಕೆಯಿಂದ ದೈವಮಾರ್ಗದಲ್ಲಿ ಅಲ್ಲಿಯವರೆಗು ತಿಳಿಯದ ವಿಧಾನವೆಲ್ಲವೂ ತಿಳಿಯುವುದು. ದೈವಧರ್ಮಗಳಲ್ಲಿ ಅತಿ ಚಿಕ್ಕ ಸೂತ್ರಗಳು ಕೂಡಾ ತಿಳಿಯುತ್ತವೆ. ಹಾಗೆ ತಿಳಿಯುವುದೇ ಅಲ್ಲದೇ ಮೂರನೆಯ ರೂಪದಲ್ಲಿ ಬಂದ ಭಗವಂತನು ತನ್ನ ಮೊದಲ ಜನ್ಮವಾದ ಕೃಷ್ಣಾವತಾರದಲ್ಲಿ ತಿಳಿಸಿರುವ ಧರ್ಮಗಳನ್ನು, ಎರಡನೆಯ ಜನ್ಮವಾದ ಯೇಸು ಅವತಾರದಲ್ಲಿ ಹೇಳಿರುವ ವಾಕ್ಯಗಳನ್ನು, ತನ್ನ ಮೂರನೆಯ ಜನ್ಮದಲ್ಲಿ ವಿವರಿಸಿ ಹೇಳುವನು. ಮೂರನೆಯ ಜನ್ಮದಿಂದ ದೈವಧರ್ಮಗಳನ್ನು ತಿಳಿಸುವ ಕಾರ್ಯವು ಮುಗಿಯುತ್ತಿದೆ. ಅಲ್ಲಿಯವರೆಗು ಏನು ತಿಳಿಯದಿದ್ದರೂ ವಿವರಿಸಿ ಹೇಳಬೇಕಾಗಿರುವ ಜವಾಬ್ದಾರಿ ಮೂರನೆಯ ಜನ್ಮದಲ್ಲಿಯೇ ಇದೆ.

ಐದುಸಾವಿರ ವರ್ಷಗಳ ಪೂರ್ವದಲ್ಲಿ ಭಗವದ್ಗೀತೆಯನ್ನು ಹೇಳಿದರೂ, ಅದು ವ್ಯಾಸನ ಕೈಯಿಂದ ಸಂಸ್ಕೃತದಲ್ಲಿ ಬರೆದಿದ್ದರೂ, ವ್ಯಾಸನು ಬರೆದಿರುವುದನ್ನು ಎಷ್ಟೋಜನ ಪಂಡಿತರು, ಸ್ವಾಮಿಗಳು ತಮ್ಮ ತಮ್ಮ ಭಾಷೆಗಳಿಗೆ ಬದಲಾಯಿಸಿ

ವಿವರಿಸಿ ಬರೆದರೂ, ಕೃಷ್ಣನು ಮೂರನೆಯ ಅವತಾರವಾಗಿ ಬರುವವರೆಗು ಅದರ ನಿಜಾರ್ಥವು ಯಾರಿಗೂ ತಿಳಿಯುವುದಿಲ್ಲ. ಅಲ್ಲಿಯವರೆಗು ಎಲ್ಲರೂ ಹೇಳಿಕೊಂಡಿರುವುದು ಕೃಷ್ಣನು ಹೇಳಿರುವ ಭಾವವಲ್ಲ. ಎಷ್ಟು ದೊಡ್ಡ ಹೆಸರು ಪಡೆದಿರುವ ಸ್ವಾಮೀಜಿಗಳು ಹೇಳಿದರೂ, ಬರೆದರೂ **"ದೇವರ ಧರ್ಮಗಳ ವಾಸ್ತವ ಭಾವವು ದೇವರಿಗೇ ತಿಳಿದಿದೆ ಮನುಷ್ಯರಿಗೆ ತಿಳಿದಿಲ್ಲ"** ಎಂಬ ಸೂತ್ರದ ಪ್ರಕಾರ ಭಗವದ್ಗೀತೆ ಸರಿಯಾಗಿ ಯಾರಿಗೂ ತಿಳಿಯದೆಂದೇ ಹೇಳಬೇಕು. ಈ ಮಾತಿನಿಂದ ಸ್ವಾಮೀಜಿಗಳೆಲ್ಲರೂ ನನಗೆ ವಿರೋಧಿಗಳಾಗಿ ಹೋಗುತ್ತಾರೆಂದು ತಿಳಿದಿದೆ. ಆದರೂ ಸೂತ್ರದ ಪ್ರಕಾರ ಹೇಳುತ್ತಿದ್ದೇನೆಂದು, ಯಾರನ್ನೂ ಅವಮಾನ ಮಾಡುವುದಕ್ಕೆ ಅಲ್ಲವೆಂದು ಗ್ರಹಿಸಬೇಕು. ಭಗವದ್ಗೀತೆ ಹುಟ್ಟಿ ಐದುಸಾವಿರ ವರ್ಷಗಳಾದರೂ, ಅದು ನಮಗೆ ಅರ್ಥವಾಗಲಿಲ್ಲವೆಂದು ಒಪ್ಪಿಕೊಳ್ಳದೆ ತಪ್ಪುವುದಿಲ್ಲ. ಭಗವದ್ಗೀತೆ ಅರ್ಥವಾಗಬೇಕೆಂದರೇ ಪುನಃ ಕೃಷ್ಣನೇ ಬಂದು, ಆ ದಿನ ಯಾವ ಭಾವನೆಯ ಹೇಳಿದ್ದಾನೋ ಆ ಭಾವನೆಯನ್ನು ವಿವರಿಸಿ ಹೇಳಿದರೇ, ಆಗ ಭಗವದ್ಗೀತೆಯೊಂದರ ಭಾವನೆ ತಿಳಿಯುವುದು. ಆದ್ದರಿಂದ ಕೃಷ್ಣನು ಮೂರನೆಯ ಅವತಾರದಲ್ಲಿ, ಮೂರನೆಯ ಪುರುಷನಾಗಿ ಬಂದಾಗ ಗೀತೆಯನ್ನು ಸಂಪೂರ್ಣವಾಗಿ ತಿಳಿಸುವನು. ಕೃಷ್ಣನು ಹೇಳಿರುವ ಮಾತನ್ನು ಕೃಷ್ಣನೇ ವಿವರಿಸಿ ಹೇಳಿದರೇ ಆಗ ಅರ್ಥವಾಗುವುದು ಹೊರತು ಬೇರೆಯವರು ಯಾರು ಹೇಳಿದರೂ ಹೇಳುವವರಿಗು ಕೂಡಾ ತಿಳಿಯದೆಂದೇ ಹೇಳಬಹುದು. ಆದಕಾರಣ ಅದು ನಮಗು ಸಹ ತಿಳಿದಿಲ್ಲ.

ಎರಡನೆಯ ಅವತಾರವಾದ ಯೇಸು ಜನ್ಮದಲ್ಲಿ ತಾನು ಹೇಳಿರುವುದೆಲ್ಲಾ ಹೇಳಿ ಕೊನೆಯಲ್ಲಿ ಹೀಗೆ ಹೇಳಿದ್ದಾನೆ. **"ಈಗ ನಾನು ಹೇಳಿರುವುದು ನಿಮಗೆ ಯಾರಿಗೂ ಅರ್ಥವಾಗುವುದಿಲ್ಲ. ನನ್ನ ನಂತರ ಬರುವ ಆದರಣಕರ್ತ ನಾನು ಹೇಳಿರುವ ವಿಷಯಗಳನ್ನು ತೆಗೆದುಕೊಂಡು ವಿವರಿಸಿ ಹೇಳುವನು. ಆಗ ನಿಮಗೆ ನನ್ನ ಮಾತುಗಳು ಅರ್ಥವಾಗುವವು"** ಎಂದಿದ್ದಾನೆ. ಕೃಷ್ಣನು ಯೇಸುವಾಗಿದ್ದಾಗ ಹೇಳಿರುವ ಈ ಮಾತನ್ನು ಅನುಸರಿಸಿ ಎರಡುಸಾವಿರ ವರ್ಷಗಳಿಂದ ಯೇಸು

ಹೇಳಿರುವ ಮಾತುಗಳು ಅರ್ಥವಾಗಲಿಲ್ಲವೆಂದು ತಿಳಿಯುತ್ತಿದೆ. ಕೃಷ್ಣನ ಮೂರನೆಯ ಅವತಾರದಲ್ಲಿಯೇ ಯೇಸು ಹೇಳಿರುವ ಮಾತುಗಳು ಕೂಡಾ ವಿವರಿಸಿ ಹೇಳಲ್ಪಡುವುದು. ಆಗ ಯೇಸು ಯಾರೋ, ಆತನು ಹೇಳಿರುವ ಮಾತುಗಳೇನೋ, ಆತನ ಮಾತುಗಳಿಗೆ ಭಾವವೇನೋ ತಿಳಿಯುತ್ತದೆ. ಅಲ್ಲಿಯವರೆಗು ನಾವು ಬೋಧಕರೆಂದು ಯೇಸು ಹೆಸರನ್ನು ಹೇಳಿಕೊಳ್ಳುತ್ತಾ, ಆತನ ಬೋಧನೆಗಳನ್ನು ವಿವರಿಸಿದರೂ, ಯೇಸು ಹೇಳಿದಂತೆ ಆದರಣಕರ್ತ ಹೇಳುವವರೆಗು ಅರ್ಥವಾಗುವುದಿಲ್ಲ. ಯೇಸು ಮಾತಿನ ಪ್ರಕಾರ ಆದರಣಕರ್ತ ಮೂಲಕವೇ ಯೇಸು ಹೇಳಿರುವ ಮಾತುಗಳ ವಿವರವೇನೋ ತಿಳಿಯುವುದು. ಆದರೇ ಅಲ್ಲಿಯವರೆಗು ಯಾವ ಬೋಧಕನು ಹೇಳಿದರೂ ಅರ್ಥವಾಗುವುದಿಲ್ಲ. ಹಾಗೆ ಅರ್ಥವಾಗಿವೆಯೆಂದರೇ ಯೇಸು ಮಾತು ಅಸತ್ಯವಾಗುವುದು. ಯೇಸು ಮಾತು ಎಂದಿಗೂ ಅಸತ್ಯವಲ್ಲ. ಆದಕಾರಣ ನಮಗೆ ಇಲ್ಲಿಯವರೆಗು ಯೇಸು ಹೇಳಿರುವ ಮಾತುಗಳು ಎಷ್ಟು ಬೆಲೆಯುಳ್ಳವೂ ಅರ್ಥವಾಗಲಿಲ್ಲವೆಂದು ಒಪ್ಪಿಕೊಳ್ಳುವುದು ಒಳ್ಳೆಯದು.

ಯೇಸು ಹೇಳಿರುವ ಮಾತುಗಳೇ ಅಲ್ಲ, ಕೃಷ್ಣನು ಹೇಳಿರುವ ಗೀತೆಯು ಕೂಡಾ ಅರ್ಥವಾಗಲಿಲ್ಲವೆಂದು ಒಪ್ಪಿಕೊಳ್ಳದೆ ತಪ್ಪುವುದಿಲ್ಲ. ನಮಗೆ ದ್ವಾಪರಯುಗದಲ್ಲಿನ ಗೀತೆ, ಕಲಿಯುಗದಲ್ಲಿನ ಯೇಸು ವಾಕ್ಯಗಳನ್ನು ವಿವರಿಸಿ ಹೇಳುವುದಕ್ಕೇ ಮೂರನೆಯ ಅವತಾರವಿದೆಯೆಂದು ತಿಳಿಯಬೇಕು. ಮೂರನೆಯ ಅವತಾರದಲ್ಲಿ ಕೃಷ್ಣನು, ಯೇಸು ಬೆರೆತಿದ್ದಾರೆ. ಆದಕಾರಣ ಕೃಷ್ಣನ ಮಾತಿಗೆ ಕೃಷ್ಣನು, ಯೇಸು ಮಾತುಗಳಿಗೆ ಯೇಸು ಮೂರನೆಯ ಪುರುಷನಿಂದ ವಿವರಿಸಿ ಹೇಳಬಲ್ಲರೆಂದು ಅಂದುಕೊಳ್ಳಬಹುದು. ಮೂರನೆಯವನು ಹಾಗೆ ಗತದಲ್ಲಿನ ವಾಕ್ಯಗಳಿಗೆ ವಿವರವನ್ನು ಹೇಳುತ್ತಾ, ಸಂದರ್ಭಾನುಸಾರವಾಗಿ ತಾನು ಹೆಳಬೇಕಾಗಿರುವುದನ್ನು ಕೂಡಾ ಹೇಳುತ್ತಾ ಹೋಗುವನು. ಒಂದುಕಡೆ ಗತದಲ್ಲಿ ತಾನೇ ಹೇಳಿರುವ ಗೀತೆಗೆ, ವಾಕ್ಯಗಳಿಗೆ ಸರಿಯಾದ ಭಾವವನ್ನು ತಿಳಿಸುತ್ತಾ ಮಧ್ಯ ಮಧ್ಯದಲ್ಲಿ ಅಲ್ಲಿಯವರೆಗು ಉಳಿದುಹೋಗಿರುವ ಧರ್ಮಗಳನ್ನು, ಸೃಷ್ಠಿ

ಆದಿಯಿಂದ ತಿಳಿಯದ ಹೊಸದಾಗಿರುವ ಧರ್ಮಗಳ ವಿವರವನ್ನು ತಿಳಿಸುತ್ತಾ ಹೋಗುವನು. ಇಲ್ಲಿ ಕೆಲವರು ಒಂದು ಪ್ರಶ್ನೆಯನ್ನು ಕೇಳಬಹುದು. ಅದು ಏನೆಂದರೇ! ಮೂರನೆಯ ಅವತಾರದಲ್ಲಿ ಕೃಷ್ಣನು, ಯೇಸು ಬೆರೆತು ಇದ್ದಾರೆ. ಗತದಲ್ಲಿ ಕೃಷ್ಣನು ಹೇಳಿರುವ ಮಾತಿಗೆ ಕೃಷ್ಣನು, ಯೇಸು ಹೇಳಿರುವ ಮಾತುಗಳಿಗೆ ಯೇಸು ಮೂರನೆಯ ಅವತಾರದಿಂದ ಹೇಳುತ್ತಾನೆಂದಿದ್ದಾರೆ. ಒಬ್ಬ ಮನುಷ್ಯನಲ್ಲಿ ಎರಡು ದೆವ್ವಗಳು ಸೇರಿಕೊಂಡಿದ್ದು ಮಾತನಾಡಿದಂತೆ ಮೂರನೆಯ ಅವತಾರವಾದ ಮನುಷ್ಯನಲ್ಲಿ ದೆವ್ವಗಳಹಾಗೆ ಕೃಷ್ಣನು, ಯೇಸು ಇಬ್ಬರು ಇದ್ದಾರಾ? ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೇ! ನಿಮಗೆ ಸುಲಭವಾಗಿ ಅರ್ಥವಾಗುವುದಕ್ಕೆ ನಾವು ಹಾಗೆ ಹೇಳಿದ್ದೇವೆ. ಆದರೇ ಮೂರನೆಯ ಅವತಾರದಲ್ಲಿ ಪ್ರತ್ಯೇಕಿಸಿ ಕೃಷ್ಣನು, ಯೇಸು ಇರುವುದಿಲ್ಲ. ದ್ವಾಪರ ಯುಗದಲ್ಲಿ ಧರ್ಮ ಪ್ರಚಾರ ನಿಮಿತ್ತ ದೇವರಿಂದ ಭಗವಂತನಾಗಿ ಯಾವ ಶಕ್ತಿ ನೇಮಿಸಲ್ಪಟ್ಟಿದೆಯೋ, ಆ ಶಕ್ತಿಯೇ ಎರಡನೆಯಬಾರಿ ಹುಟ್ಟಿದೆ. ಆಗ ಗುರುತಿಗಾಗಿ ಆ ಶರೀರಕ್ಕೆ ಯೇಸು ಎಂದು ಹೆಸರನ್ನು ಇಡಲಾಗಿತ್ತು. ಹಾಲಿನವನು ಬ್ರಾಹಣ ಬೀದಿಯೊಳಗೆ ಹೋಗಿ ಶಂಕರಯ್ಯ ಎಂಬ ತನ್ನ ಹೆಸರನ್ನು ಶಂಕರಶಾಸ್ತ್ರಿ ಎಂದು ಬದಲಾಯಿಸಿಕೊಂಡು ಹಾಲನ್ನು ಅಲ್ಲಿ ಮಾರಿದಹಾಗೆ, ಕೃಷ್ಣನೇ ಇಜ್ರಾಯೆಲ್ ದೇಶದಲ್ಲಿ ತನ್ನ ಹೆಸರನ್ನು ಯೇಸುವಾಗಿ ಹೇಳಿಕೊಂಡು ಧರ್ಮಗಳನ್ನು ತಿಳಿಸಿದ್ದಾನೆಂದು ಗ್ರಹಿಸಬೇಕು. ಹಾಗೆ ಹೆಸರನ್ನು ಬದಲಾಯಿಸಿ ಕೊಂಡು ಹೇಳಿರುವ ಶಕ್ತಿಯಾದ ಕೃಷ್ಣನೇ, ಮೂರನೆಯ ಅವತಾರದಲ್ಲಿ "ಆದರ್ಶಕರ್ತ" ಎಂಬ ಹೆಸರನ್ನು ಇಟ್ಟುಕೊಂಡು ಬರುತ್ತಾನೆಂದು ದ್ವಾಪರಯುಗ ದಲ್ಲಿ ಕೊನೆಯ ಸಮಯದಲ್ಲಿ ಬೇಟೆಗಾರನಿಗೆ ಹೇಳಿ ಹೋಗುವುದು ನಡೆದಿದೆ. ಯೇಸುವಾಗಿರುವಾಗ "ಆದರಣಕರ್ತ" ಬರುತ್ತಾನೆಂದು ಹೇಳಿರುವ ಕೃಷ್ಣನು ಮೊದಲು ದ್ವಾಪರಯುಗದಲ್ಲಿ ಬೇಟೆಗಾರನಿಗೆ ಹೇಳಿದಾಗ ಬರುವ ಮೂರನೆ ಯವನು "ಆದರ್ಶಕರ್ತ" ಎಂಬ ಹೆಸರು ಹೊಂದಿರುತ್ತಾನೆಂದು ಹೇಳಿದ್ದಾನೆ. ಇಲ್ಲಿ ಆದರಣಕರ್ತ, ಆದರ್ಶಕರ್ತ ಎಂಬ ಎರಡು ಹೆಸರುಗಳು ಕಾಣಿಸುತ್ತಿವೆ.

ಹೇಳಿರುವವನು ಒಂದೇ ಶಕ್ತಿ (ಒಂದೇ ವ್ಯಕ್ತಿ) ಆಗಿರುವಾಗ ಎರಡು ಹೆಸರುಗಳು ಹೇಳುವುದೇನು? ಯಾವುದು ನಿಜವೆಂದು ನಂಬಬೇಕು? ಎಂದು ಕೆಲವರು ಕೇಳಬಹುದು. ಅದಕ್ಕೆ ಉತ್ತರವೇನೆಂದರೇ!

ಈ ಪ್ರಪಂಚವನ್ನು, ಅದರಲ್ಲಿನ ಜೀವರಾಶಿಗಳನ್ನು ಸೃಷ್ಟಿಸಿರುವ ದೇವರೇ ಸಾಕ್ಷಾತ್ತು ಭಗವಂತನಾಗಿ ಅವತರಿಸಿದಾಗ, ತನ್ನ ಮೂರು ಅವತಾರಗಳಲ್ಲಿ ಒಂದರಲ್ಲಿ ಒಂದು ಹೆಸರನ್ನು ಹೇಳಿ, ಎರಡನೆಯದರಲ್ಲಿ ಮತ್ತೊಂದು ಹೆಸರನ್ನು ಹೇಳುವುದೇನು? ಎಂದು ನನ್ನ ಬುದ್ಧಿಗೂ ಸಹ ನಿಮಗೆ ಬಂದಿರುವ ಪ್ರಶ್ನೆಯೆ ಬಂದಿದೆ. ನಿಮಗೆ ಚೆನ್ನಾಗಿ ಅರ್ಥವಾಗುವುದಕ್ಕೆ ಶರೀರದಲ್ಲಿ ಪ್ರಶ್ನೆ ಹೇಗೆ ಹುಟ್ಟುತ್ತಿದೆ. ಅದಕ್ಕೆ ಉತ್ತರ ಹೇಗೆ ಬರುತ್ತಿದೆಯೋ, ಶರೀರದೊಳಗೆ ನಡೆಯುವುದನ್ನು ವಿವರಿಸುತ್ತಾ ಹೇಳಿಕೊಳ್ಳೋಣ. ನನ್ನಲ್ಲಿನ ಬುದ್ಧಿ ಎರಡು ಹೆಸರುಗಳು ಯಾಕೆ ಹೇಳಿದ್ದಾನೆಂದು ಒಂದು ಕಡೆ ಪ್ರಶ್ನಿಸಿದೆ, ಅದೇ ಬುದ್ಧಿಯೇ ದೇವರು ನಿಜವೇ ಹೇಳುತ್ತಾನೆ ಸುಳ್ಳು ಯಾಕೆ ಹೇಳುತ್ತಾನೆಂದು ಮತ್ತೊಂದು ಕಡೆಯಿಂದ ಉತ್ತರ ಹೇಳಿದೆ. ನಾನು ನನ್ನ ಬುದ್ಧಿಗೆ ಪಕ್ಕದಲ್ಲಿದ್ದು ನೋಡುತ್ತಿದ್ದೇನೆ. ನನ್ನ ಬುದ್ಧಿ ಒಂದುಕಡೆ ಪ್ರಶ್ನೆ ಹಾಕಿದೆ. ಮತ್ತೊಂದು ಕಡೆ ಉತ್ತರಹೇಳಿದೆ. ನಂತರ ತಕ್ಷಣವೇ ಬುದ್ಧಿ ಮತ್ತೊಂದು ಪ್ರಶ್ನೆಯನ್ನು ಪ್ರಶ್ನಿಸಿದೆ. ನೀನೆಂದಹಾಗೆ ದೇವರು ನಿಜವೇ ಹೇಳಿದರೇ ಯಾವುದೋ ಒಂದನ್ನು ಹೇಳಬಹುದಲ್ಲವೇ! ಬುದ್ಧಿಯೇ ಹೀಗೆ ಉತ್ತರ ಹೇಳುತ್ತಿದೆ. ಹಾಗೆ ಎರಡು ಹೆಸರುಗಳು ಹೇಳುವುದಕ್ಕೆ ಕಾರಣವಿರುತ್ತದೆ. ಅದಕ್ಕೆ ನನ್ನ ಬುದ್ಧಿಯೇ ಮತ್ತೇ ಕೇಳಿದೆ. ಆ ಕಾರಣವೇನೋ ಹೇಳು ಇಲ್ಲದೇ ಹೋದರೇ ಭಗವಂತನು ಹೇಳಿರುವುದು ತಪ್ಪು ಎಂದು ಒಪ್ಪಿಕೋ ಎಂದಿದೆ. ಆ ಮಾತಿಗೆ ಭಗವಂತನು ತಪ್ಪು ಹೇಳುವನಾ, ಎಂದಿಗೂ ಹೇಳುವುದಿಲ್ಲ. ಹಾಗೆ ಎರಡು ಹೆಸರುಗಳನ್ನು ಹೇಳುವುದಕ್ಕೆ ಕಾರಣವನ್ನು ಹೇಳುತ್ತೇನೆ ಕೇಳು ಎಂದು ಬುದ್ಧಿ ಬುದ್ಧಿಗೇ ಹೇಳಿದೆ. ನಾನು ಗಮನಿಸುತ್ತಿರುವಾಗ ನನ್ನ ಪಕ್ಕದಲ್ಲಿರುವ ಬುದ್ಧಿ ಎರಡು ವಿಧಗಳಾಗಿ ಪ್ರಶ್ನೆ ಉತ್ತರವಾಗಿ ಮಾತನಾಡಿಕೊಳ್ಳುವುದು ನಡೆದಿದೆ. ನನ್ನೊಬ್ಬನಿಗೇ ಅಲ್ಲ ಪ್ರತಿ ಶರೀರದಲ್ಲಿಯೂ

ಬುದ್ಧಿ ಎರಡು ವಿಧಗಳಾಗಿ ಪ್ರತಿ ವಿಷಯವನ್ನು ವಿಂಗಡಿಸುವುದು. ಪ್ರಸ್ತುತಕ್ಕೆ ನನ್ನ ಶರೀರದಲ್ಲಿ ನಾನು ನೋಡುತ್ತಿರುವಾಗ ನನ್ನ ಬುದ್ಧಿ ಭಗವಂತನು ಎರಡು ಹೆಸರುಗಳನ್ನು ಯಾಕೆ ಹೇಳಿದ್ದಾನೋ ವಿವರಿಸುತ್ತದೆ. ಅದನ್ನೇ ಹೊರಗೆ ನಿಮಗೆ ತಿಳಿಯುವಂತೆ ವಿವರಿಸುತ್ತಿದ್ದೇನೆ ನೋಡಿರಿ.

ಭೂಮಿಮೇಲಿರುವ ಮನುಷ್ಯರಲ್ಲಿ ಮೂರು ವಿಧದವರಿದ್ದಾರೆಂದು ಹೇಳಬಹುದು. ಒಂದು ವಿಧದ ಮನುಷ್ಯರು ದೇವರ ಮೇಲೆ ವಿಶ್ವಾಸವಿರುವವರು, ಎರಡನೆಯ ವಿಧದವರು ದೇವರ ಮೇಲೆ ವಿಶ್ವಾಸವಿಲ್ಲದವರು.ಮೂರನೆಯ ವಿಧದವರು ದೇವರೆಂಬ ವಿಷಯವನ್ನೇ ತಿಳಿಯದೇ ತಟಸ್ಥವಾಗಿ ಇರುವವರು. ಮೂರನೆಯ ವಿಧದವರು ಬಗಿಯುವುದು ಇಲ್ಲ, ಹೂತಿಡುವುದು ಇಲ್ಲ ಎಂಬಂತೆ ದೇವರನ್ನು ಕುರಿತು ಇದ್ದಾನೆಂದಾಗಲೀ, ಇಲ್ಲವೆಂದಾಗಲೀ ಮಾತನಾಡುವುದಿಲ್ಲ. ಯಾರಾದರೂ ದೇವರಿದ್ದಾನೆಂದು ಹೇಳಿದರೂ ಕೇಳುತ್ತಾರೆ. ಅಷ್ಟೇ ಹೊರತು ನಂತರ ಆ ಮಾತಿನ ಬಗ್ಗೆ ತಲೆ ಕೆಡಿಸಿಕೊಳ್ಳುವುದಿಲ್ಲ. ದೇವರಿಲ್ಲವೆಂದು ಹೇಳುವವರ ಮಾತುಗಳನ್ನು ಕೂಡಾ ಕೇಳುತ್ತಾರೆ. ಆದರೇ ಆ ಮಾತುಗಳ ಬಗ್ಗೆ ತಲೆ ಕೆಡಿಸಿಕೊಳ್ಳುವುದಿಲ್ಲ. ನಾವು ಅಂಥವರನ್ನು ಬಹಳಜನರನ್ನು ನೋಡಿದ್ದೇವೆ. ಒಳ್ಳೆಯ ಜ್ಞಾನವಿರುವ ಗ್ರಂಥಗಳನ್ನು ಅವರಿಗೆ ಕೊಟ್ಟಿದ್ದೇವೆ. ಕೊಟ್ಟರೇ ತೆಗೆದುಕೊಳ್ಳುತ್ತಾರೆ ಹೊರತು ಅವರು ಓದುವುದಿಲ್ಲ. ಅವರು ಓದುವುದಿಲ್ಲವೆಂದು ತಿಳಿದು, ನಾವೇ ಜ್ಞಾನವನ್ನು ಅರ್ಥವಾಗುವಂತೆ ವಿವರವಾಗಿ ಹೇಳಬೇಕೆಂದು ಹೇಳಿದರೇ ಕೇಳುತ್ತಾರೆ. ಆದರೇ ಕೇಳಿದಕ್ಕೆ ಸ್ವಲ್ಪವಾದರೂ ಸ್ಪಂದಿಸುವುದಿಲ್ಲ. ಅಂಥವರು ಯಾರು ಹೇಳಿದರೂ ಕೇಳುತ್ತಾರೆ. ಆದರೇ ಅವರಲ್ಲಿ ಬದಲಾವಣೆ ಇರುವುದಿಲ್ಲ. ಅಂಥಹ ಮನುಷ್ಯರೆಲ್ಲರನ್ನೂ ಒಂದು ವಿಧವಾಗಿ ಹೇಳಬಹುದು. ಅಂಥವರು ಭೂಮಿಮೇಲೆ ಹೆಚ್ಚಿನ ಜನರಿದ್ದಾರೆ. ಅವರ ದಾರಿಯಲ್ಲಿ ಅವರು ಹೋಗುವುದು ಹೊರತು ಅವರು ಯಾರ ದಾರಿಗೂ ಬರುವುದಿಲ್ಲ. ಉಳಿದ ಮನುಷ್ಯರಲ್ಲಿ ಕೆಲವರು ದೇವರ ಮೇಲೆ ವಿಶ್ವಾಸವಿರುವವರು ಇದ್ದಾರೆ. ಆದರೇ ಅವರಿಗೆ ದೇವರ ಮೇಲೆ ವಿಶ್ವಾಸವಿದ್ದರೂ, ಎಲ್ಲರೂ ಒಂದೇ

ದಾರಿಯಲ್ಲಿ ಹೋಗದೇ ಅನೇಕ ವಿಧಗಳಾಗಿ ಅವರು ದೇವರನ್ನು ಆರಾಧಿಸುತ್ತಿದ್ದಾರೆ. ಅವರಲ್ಲಿ ಕೆಲವರದು ಒಳ್ಳೆಯ ಮಾರ್ಗವಿರಬಹುದು, ಕೆಲವರದು ಅಷ್ಟು ಒಳ್ಳೆಯ ಮಾರ್ಗವಾಗದೆ ಹೋಗಬಹುದು. ಹೀಗೆ ವಿಶ್ವಾಸಿಗಳ ವಿಧಗಳೇ ಅಲ್ಲದೇ, ಅವಿಶ್ವಾಸವಿರುವವರು ಕೂಡಾ ಭೂಮಿಮೇಲೆ ಕೆಲವರಿದ್ದಾರೆ. ಅವರೇ ಪೂರ್ತಿ ನಾಸ್ತಿಕರು, ಅಂಥವರು ಪೂರ್ತಿಯಾಗಿ ದೇವರೇ ಇಲ್ಲವೆನ್ನುತ್ತಿರುತ್ತಾರೆ.

ಸ್ಥೂಲವಾದ ಪ್ರಪಂಚ ವಿದ್ಯೆಗಳು ಓದಿದ ಕೆಲವರು, ತಮಗೆ ಸ್ವಲ್ಪ ಮಾತ್ರ ವಿಜ್ಞಾನ ತಿಳಿದಷ್ಟುಮಾತ್ರಕ್ಕೆ, ವಿಜ್ಞಾನವೆಲ್ಲಾ ತಿಳಿದು ಹೋಗಿದೆಯೆಂಬ ಭ್ರಮೆಯಲ್ಲಿ ಮುಳುಗಿ ಹೋಗಿ, ಕೊನೆಗೆ ದೇವರೇ ಇಲ್ಲವೆನ್ನುತ್ತಿದ್ದಾರೆ. 'ದೇವರು' ಎಂಬ ಮಾತು ಕೇವಲ ಕೆಲವರ ಭ್ರಮಯೇ ಎಂದು ಹೇಳುತ್ತಿರುತ್ತಾರೆ. ಎಲ್ಲಾ ತಾವೇ ಮಾಡಿಕೊಳ್ಳುತ್ತಿದ್ದೇವೆಂದು, ನಾವು ಕಂಡುಕೊಂಡ ಯಂತ್ರಗಳಿಂದ ಪರಿಕರಗಳಿಂದ ನಾವು ಸುಖಗಳನ್ನು ಅನುಭವಿಸುತ್ತಿದ್ದೇವೆಂದು ಹೇಳಿಕೊಳ್ಳುತ್ತಿದ್ದಾರೆ. ನಮ್ಮ ಮೇಧಸ್ಸಿನಿಂದ ಎಷ್ಟೋ ಕಂಡುಕೊಂಡಿದ್ದೇವೆ, ನಂತರ ಎಷ್ಟೋ ಕಂಡುಕೊಳ್ಳುತ್ತೇವೆ ಎಂದು ಹೇಳುತ್ತಾ, ಈ ದಿನ ಸೆಲ್‌ಫೋನ್‌ನಲ್ಲಿ ಮಾತನಾಡುತ್ತಿದ್ದೇವೆಂದರೂ, ಕಂಪ್ಯೂಟರ್‌ಗಳಿಂದ ಕೆಲಸವನ್ನು ಮಾಡಿಸುತ್ತಿದ್ದೇವೆಂದರೂ, ವಿಮಾನಗಳಲ್ಲಿ ಕ್ಷಣಗಳಲ್ಲಿ ಗಮ್ಯವನ್ನು ಸೇರುತ್ತಿದ್ದೇವೆಂದರೂ ಇವೆಲ್ಲವೂ ಮನುಷ್ಯ ಕಂಡುಕೊಂಡ ಸೈನ್ಸಿನಿಂದಲೇ ನಡೆಯುತ್ತಿದೆ. ಸೈನ್ಸನ್ನು ತಿಳಿಯದ ಮನುಷ್ಯರು ತಮ್ಮನ್ನು ತಾವು ನಂಬದೆ ದೇವರನ್ನು ಮೂಢವಾಗಿ ನಂಬುತ್ತಿದ್ದಾರೆಂದು ಹೇಳುತ್ತಾ, ದೇವರನ್ನು ನಂಬುವವರನ್ನು ತಿಳಿವಳಿಕೆ ಇಲ್ಲದವರಾಗಿ ಭಾವಿಸುತ್ತಿರುತ್ತಾರೆ. ದೇವರನ್ನು ಅಸೂಯೆಯಿಂದ ಮಾತನಾಡುತ್ತಿರುತ್ತಾರೆ. ಇಂಥವರನ್ನು ಕುರಿತು ಒಂದು ಉದಾಹರಣೆಯನ್ನು ಹೇಳಿಕೊಳೋಣ. ಒಬ್ಬನು ತನ್ನ ತಮ್ಮನಿಗೆ ನೀತಿಯನ್ನು ಹೇಳುತ್ತ ನಾನು ಮತ್ತೊಬ್ಬರ ಮೇಲೆ ಆಧಾರಪಟ್ಟು ಬದುಕುತಿಲ್ಲ, ನನ್ನ ಕಾಲಿನ ಮೇಲೆ ನಾನು ನಿಂತು ಬದುಕುತ್ತಿದ್ದೇನೆ. ನೀನು ಹಾಗೆ ನಿನ್ನ ಕಾಲಿನಮೇಲೆ

ನಿಂತುಕೊ ಎಂದಿದ್ದಾನಂತೆ. ಆ ಮಾತನ್ನು ಕೇಳಿದ ಅವನ ತಮ್ಮ ನೀನು ನಿನ್ನ ಕಾಲಿನ ಮೇಲೆ ನಿಂತಿಲ್ಲ, ನಾನು ನನ್ನ ಕಾಲಿನ ಮೇಲೆ ನಿಂತಿಲ್ಲ. ಇಬ್ಬರೂ ಸೇರಿ ಭೂಮಿಮೇಲೆ ನಿಂತಿದ್ದೇವೆ ಎಂದನಂತೆ. ತಮ್ಮನು ದಡ್ಡನೆಂದು ಅಣ್ಣ ತಮ್ಮನಿಗೆ ನೀತಿಯನ್ನು ಹೇಳಿದನು. ಆದರೆ ತಮ್ಮನು ಕೇಳಿದ ಮಾತನ್ನು ಅನುಸರಿಸಿ ಅಣ್ಣನೇ ದಡ್ಡನೆಂದು ತಿಳಿಯುತ್ತಿದೆ. ನನ್ನ ಕಾಲಿನ ಮೇಲೆ ನಾನು ನಿಂತಿದ್ದೇನೆಂದುಕೊಳ್ಳುವುದು ಕೇವಲ ಭ್ರಮೆ ಮಾತ್ರವೇ. ಹಾಗೆ ಅಂದುಕೊಳ್ಳುವನು ತಾವು ಮೊದಲಿನಿಂದಲು ಭೂಮಿಮೇಲೆ ನಿಂತಿದ್ದೇನೆಂಬ ಮಾತನ್ನು ಮರೆತು ಹೋಗಿದ್ದಾನೆ. ಇದರ ಪ್ರಕಾರ ವಿಜ್ಞಾನ ತಿಳಿದಿರುವವನು ತಮ್ಮ ವಿಜ್ಞಾನಕ್ಕೆ ಆಧಾರವಾದ ಮೆದುಳನ್ನು ದೇವರೇ ಕೊಟ್ಟಿದ್ದಾನೆಂದು, ದೇವರು ಕೊಟ್ಟ ಮೆದುಳಿಲ್ಲದೇ ಯಾರೂ ವಿಜ್ಞಾನಿಯಲ್ಲವೆಂದು, ಶರೀರದಲ್ಲಿನ ಮೆದುಳೇ ಸರ್ವ ವಿಜ್ಞಾನಗಳಿಗೆ ಆಧಾರವೆಂದು ತಿಳಿಯದೆ, ನಾನು ವಿಜ್ಞಾನಿಯೆಂದು ಅಂದುಕೊಳ್ಳುವುದು ನೆಲವನ್ನು ಬಿಟ್ಟು ಅಂಗಸಾಧನೆ ಮಾಡಿದಂತಾಗುವುದು. ಹಾಗೆಯೇ ಭೂಮಿಮೇಲೆ ನಿಂತ ವಿಷಯವನ್ನು ಮರೆತುಹೋಗಿ ನನ್ನ ಕಾಲಿನ ಮೇಲೆ ನಾನು ನಿಂತಿದ್ದೇನೆಂದು ಹೇಳಿದಂತಿರುತ್ತದೆ.

ಸಮಸ್ತ ಜ್ಞಾನಕ್ಕು, ವಿಜ್ಞಾನಕ್ಕು ದೇವರೇ ಆಧಾರವೆಂದು ತಿಳಿಯದೆ, ನಾವು ವಿಜ್ಞಾನಿಗಳೆಂದು ಅಂದುಕೊಳ್ಳುವವರ ಮೆದುಳಿನಲ್ಲಿ ಆಲೋಚನೆಗಳನ್ನು, ಊಹೆಗಳನ್ನು ದೇವರೇ ಒದಗಿಸುತ್ತಿರುವಾಗ, ಯಾವ ಶಾಸ್ತ್ರಜ್ಞನು ಏನು ಕಂಡುಹಿಡಿದರೂ ಆತನಿಗೆ ಆ ಊಹೆಯನ್ನು ಒದಗಿಸಿದವನು ಶರೀರದಲ್ಲಿನ ದೇವರೇ ಆಗಿರುವಾಗ, ಅದು ತಿಳಿಯದೆ ನಾನೇ ಕಂಡುಹಿಡಿದಿದ್ದೇನೆ ಎಂದುಕೊಳ್ಳುವುದು, ಭೂಮಿಯನ್ನು ಬಿಟ್ಟು ತನ್ನ ಕಾಲುಗಳ ಮೇಲೆ ತಾನು ನಿಂತಿದ್ದೇನೆಂದು ಹೇಳಿದಂತಿದೆ. ಅಂಥವನು ತಮ್ಮ ಮೇದಸ್ಸಿಗೆ ತಾವೇ ಕಾರಕರೆಂಬ ಅಹಂನಿಂದ ತುಂಬಿದವನಾಗಿ, ತಮ್ಮ ಶರೀರದಲ್ಲಿನ ದೇವರನ್ನು ಕೂಡಾ ನಿಂದಿಸುತ್ತಿದ್ದಾರೆ. ನನಗೆ ತಿಳಿಯದಂತೆ ನನ್ನಲ್ಲಿ ಯಾರಿದ್ದಾರೆಂದು ಪ್ರಶ್ನಿಸುತ್ತಿರುತ್ತಾರೆ. ಅಂಥವರನ್ನು ಕುರಿತು ಕೃಷ್ಣನು ಭಗವದ್ಗೀತೆಯಲ್ಲಿ ದೈವಾಸುರ

ಸಂಪದ್ವಿಭಾಗ ಯೋಗವೆಂಬ ಅಧ್ಯಾಯದಲ್ಲಿ 18ನೇ ಶ್ಲೋಕದಲ್ಲಿ ಹೀಗೆ ಹೇಳಿದ್ದಾನೆ.

***ಶ್ಲೋ॥ 18. ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂಚ ಸಂಶ್ರಿತಾಃ***
***ಮಾ ಮಾತ್ಮ ಪರದೇಹೇಷು ಪ್ರದ್ವಿಷನ್ತೋ ಭ್ಯ ಸೂಯಕಾಃ***

**ಭಾವಾರ್ಥ:–** "ಅಂಥವರಲ್ಲಿ ಅಹಂಕಾರವು ಪೂರ್ತಿಯಾಗಿ ಇದ್ದು ಕಾಮ, ಕ್ರೋಧ, ಗರ್ವ ಬಲವಾಗಿ ಕೆಲಸಮಾಡಿದರೇ, ತಮ್ಮ ಶರೀರಗಳಲ್ಲಿಯೂ ಮತ್ತು ಇತರರ ಶರೀರಗಳಲ್ಲಿಯು ಇರುವಂಥ ನನ್ನನ್ನು ಅಸೂಯೆಯಿಂದ ದ್ವೇಷಿಸುತ್ತಿದ್ದಾರೆ." ಎಂದು ಕೃಷ್ಣನು ಹೇಳಿದ್ದಾನೆ. ಅಂಥವರನ್ನು ತಾನು ಏನು ಮಾಡುವನೋ ಸಹ ಪಕ್ಕ ಕೆಳಗಿನ ಶ್ಲೋಕಗಳಲ್ಲಿ ಹೇಳಿದ್ದಾನೆ.

**19 ಶ್ಲೋ॥ *ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ।***
***ಕ್ಷಿಪಾ ಮ್ಯಜಸ್ರ ಮಶುಭಾ ನಾಸುರೀ ಷ್ವೇವ ಯೋನಿಷು ॥***

**20 ಶ್ಲೋ॥ *ಆಸುರೀಂ ಯೋನಿ ಮಾಪನ್ನಾ ಮೂಢಾ ಜನ್ಮನಿ ಜನ್ಮನಿ ।***
***ಮಾ ಮಪ್ರಾ ಪ್ಯೈವ ಕೌಂತೇಯ! ತತ್ಯಾನ್ಯೈಧಮಾಂ ಗತಿಂ ॥***

**ಭಾವಾರ್ಥ:** "ಕ್ರೂರಿಗಳು, ದ್ವೇಷಿಗಳು, ಶುಭವನ್ನು ದೂಷಿಸುವ ಆ ನರಾಧಮರನ್ನು ಅಸುರ ಯೋನಿಯಲ್ಲೇ ತಳ್ಳಿ, ಸಂಸಾರ ದುಃಖ ಗತಿಗಳನ್ನು ಹೊಂದುವಂತೆ ಮಾಡುವೆನು. ಹಾಗೆ ಅಸುರ ಯೋನಿಗಳಲ್ಲಿ ಜನ್ಮಿಸಿದವರು ಜನ್ಮಜನ್ಮಕ್ಕೂ ಅಜ್ಞಾನಿಗಳಾಗುತ್ತ, ನನ್ನನ್ನು ಹೊಂದುವ ಜ್ಞಾನವೊಂದರ ವಿಧಾನವನ್ನೇ ತಿಳಿಯಲಾರರು. ಅಂಥವರು ಜನ್ಮಜನ್ಮಕ್ಕೂ ಅಧೋಗತಿ ಹೊಂದುತ್ತಿರುತ್ತಾರೆ. ಅವರಿಗೆ ನನ್ನ ಜ್ಞಾನದ ಒಂದು ತೀರವೇ(ಗಟ್ಟು) ಸಿಗುವುದಿಲ್ಲ" ಎಂದು ಕೃಷ್ಣನು ನಾಸ್ತಿಕವಾದಿಗಳನ್ನು ಕುರಿತು ಮೊದಲೇ ಹೇಳಿದ್ದಾನೆ.

ದೇವರ ಮೇಲೆ ಎಂತಹ ನಂಬಿಕೆಯಿಲ್ಲದೇ ದೇವರನ್ನು ದೂಷಿಸುವವರು, ದೇವರ ಸ್ಥಾನವನ್ನು ಹೀಯಾಳಿಸಿ ಮಾತನಾಡುವವರು, ಎಲ್ಲ ಕೆಲಸಗಳಿಗೆ

ತಮ್ಮ ಬುದ್ಧಿವಂತಿಕೆ ಹೊರತು ದೇವರ ಪ್ರಮೇಯ ಇಲ್ಲವೆನ್ನುವವರು, ವಿಜ್ಞಾನ (ಸೈನ್ಸ) ವನ್ನು ಅಡ್ಡವಿಟ್ಟುಕೊಂಡು ಸೈನ್ಸಿಗೆ ಆಧಾರವಾದ ದೇವರನ್ನು ಇಲ್ಲವೆನ್ನುವವರು ಯಾರಾದರೇ ಇದ್ದಾರೋ, ಅಂಥವರು ಎಂದಾದರೂ ದೇವರ ಜ್ಞಾನವೇನೋ ನೋಡಬೇಕೆಂದುಕೊಂಡರೂ, ಅವರಿಗೆ ತನ್ನ ಜ್ಞಾನದ ಒಂದು ತೀರ (ಗಟ್ಟು) ದೊರೆಯದಂತೆ ಮಾಡುತ್ತೇನೆಂದು ದೇವರೇ ಹೇಳಿದ್ದಾನೆ. ಇಂದಿನ ಕಾಲದಲ್ಲಿ ದೈವಜ್ಞಾನವು ಎಷ್ಟೋ ಗ್ರಂಥ ರೂಪಗಳಲ್ಲಿ ಮತ್ತು ದೃಶ್ಯ ರೂಪಗಳಾದ ಡಿ.ವಿ.ಡಿಗಳಲ್ಲಿಯು ದೊರೆಯುತ್ತದೆ. ಹಾಗಿರುವಾಗ ಜ್ಞಾನವನ್ನು ತಿಳಿದುಕೊಳ್ಳುವುದಕ್ಕೆ ಗುರುವಿನ ಹತ್ತಿರಕ್ಕೆ ಹೋಗಬೇಕಾದ ಅವಶ್ಯವಿಲ್ಲ. ದೇವರು ನನ್ನ ಜ್ಞಾನವು ನಿಮಗೆ ದೊರೆಯುವುದಿಲ್ಲ ಎಂದರೂ, ಅದು ಮಾರುಕಟ್ಟೆಯಲ್ಲಿ ಹಣ ಕೊಟ್ಟರೇ ಗ್ರಂಥರೂಪಗಳಲ್ಲು, ದೃಶ್ಯರೂಪಗಳಲ್ಲು ದೊರೆಯುತ್ತಿದೆ ಅಲ್ಲವೇ! ಎಂದು ಕೆಲವರು ಬುದ್ಧಿವಂತರು ಅಂದುಕೊಳ್ಳುತ್ತಿದ್ದಾರೆ. ನಾವು ಗುರುವಿನ ಬಳಿಗೆ ಹೋಗದಿದ್ದರೂ ಆತನ ಜ್ಞಾನವು ನಮ್ಮ ಮನೆಗೇ ಬರುತ್ತಾಯಿದೆ, ನಮಗೆ ಜ್ಞಾನವು ತಿಳಿಯುತ್ತಿದೆ ಎಂದುಕೊಳ್ಳುವವರು ಇದ್ದಾರೆ. ದೇವರ ಮೇಲೆ ವಿಶ್ವಾಸ ಇಲ್ಲದವರಿಗೆ, ಜ್ಞಾನದ ಮೇಲೆ ಶ್ರದ್ಧೆ ಉಂಟಾದರೂ, ಗುರು ಮೇಲೆ ವಿಶ್ವಾಸವಿಲ್ಲದವರಿಗೆ ಗುರುವಿನ ಜ್ಞಾನದ ಮೇಲೆ ಶ್ರದ್ಧೆ ಉಂಟಾದರೂ, ಆ ಜ್ಞಾನವು ಗ್ರಂಥ ರೂಪಗಳಲ್ಲಿ ದೊರೆತರೂ ಗ್ರಂಥದಲ್ಲಿನ ಜ್ಞಾನವು ತಲೆಗೇರುವುದಿಲ್ಲ. ಅದು ಯಾಕೆ ಏರುವುದಿಲ್ಲ ಎಂದರೇ! ತಿಳಿಯುವ ಜ್ಞಾನದಲ್ಲಿ ಅನೇಕ ಸಂಶಯಗಳು ಏರ್ಪಟ್ಟು ಜ್ಞಾನವು ಅರ್ಥವಾಗದೆ ಹೋಗುವುದು. ಒಂದುವೇಳೆ ಅರ್ಥವಾದರೂ, ಅದರ ಅನುಭವವಿಲ್ಲದೆ ಆಚರಣೆ ಅವರಲ್ಲಿ ಇಲ್ಲದೇ ಹೋಗುವುದು. ಹೀಗೆ ಎರಡು ವಿಧಗಳಾಗಿ ಜ್ಞಾನವು ಅವನಿಗೆ ಅಂಟದೇ ಹೋಗುತ್ತಿದೆ.

ಈಗ ಅಸಲು ವಿಷಯಕ್ಕೆ ಬರೋಣ. ಪರಮಾತ್ಮಶಕ್ತಿ ಭಗವಂತನಾಗಿ ಭೂಮಿಮೇಲಕ್ಕೆ ಬಂದಾಗ ಅದರ ಕಾರ್ಯವು ಪೂರ್ತಿಯಾಗುವುದಕ್ಕೆ ಮೂರು ಸಲ ಭಗವಂತನು ಅವತರಿಸಬೇಕೆಂದುಕೊಂಡಿದ್ದೇವೆ. ಮೊದಲ ಅವತಾರವಾಗಿ

ಬಂದಿರುವವನು ಕೃಷ್ಣನು. ಎರಡನೆಯ ಅವತಾರವಾಗಿ ಬಂದಿರುವವನು ಯೇಸು, ನಂತರ ಮೂರನೆಯ ಅವತಾರ ಬರುತ್ತದೆಂದು ಮೊದಲ ಅವತಾರ ಕೃಷ್ಣನು ಹೇಳಿದ್ದಾನೆ. ಕೃಷ್ಣನು ಮೂರನೆಯ ಅವತಾರವನ್ನು ಕುರಿತು "ಆದರ್ಶಕರ್ತ" ಎಂಬ ಹೆಸರನ್ನು ಹೇಳಿದ್ದಾನೆ. ಯೇಸು ಎರಡನೆಯ ಅವತಾರವನ್ನು ಕುರಿತು "ಆದರಣಕರ್ತ" ಬರುತ್ತಾನೆಂದು ಹೇಳಿದ್ದಾನೆ. ಈ ವಿಧವಾಗಿ ಕೃಷ್ಣನು, ಯೇಸು ಎರಡು ಬೇರೆಬೇರೆ ಹೆಸರುಗಳನ್ನು ಹೇಳುವುದರಿಂದ ಕೃಷ್ಣನು, ಯೇಸು ಇಬ್ಬರೂ ಒಬ್ಬರಲ್ಲ ಎಂದು ತಿಳಿದುಹೋಗುವುದು. ಇಬ್ಬರು ಒಂದೇ ಆದರೇ ಮೂರನೆಯ ಅವತಾರವನ್ನು ಕುರಿತು ಬೇರೆಬೇರೆ ಹೆಸರುಗಳನ್ನು ಯಾಕೆ ಹೇಳುವರೆಂಬ ಪ್ರಶ್ನೆಬರುವುದು. ಪ್ರತ್ಯಕ್ಷವಾಗಿ ಯೇಸು, ಕೃಷ್ಣನು ಬರುವ ವ್ಯಕ್ತಿಯ ಹೆಸರನ್ನು ಬೇರೆಬೇರೆಯಾಗಿ ಹೇಳುವುದರಿಂದ, ಹೇಳಿರುವ ಇವರಿಬ್ಬರೂ ಒಂದಲ್ಲವೆಂದು ನಿರೂಪಣೆಯಾಗಿ ತಿಳಿದುಹೋಗುತ್ತಿದೆ. ಹಾಗೆ ಕೃಷ್ಣನು, ಯೇಸು ಬೇರೆಬೇರೆಯೆಂದು ಆಧಾರದಿಂದ ತಿಳಿಯುವುದರಿಂದ ಅಜ್ಞಾನದ ದ್ವಾರ ತೆರೆದುಕೊಂಡಂತೇ, ಜ್ಞಾನ ದ್ವಾರ ಮುಚ್ಚಿಕೊಂಡ ಹಾಗೆಯೇ ಆಗುತ್ತಿದೆ. ಇದನ್ನನುಸರಿಸಿ ಅವಿಶ್ವಾಸಿಗಳಿಗೆ, ನನ್ನನ್ನು ದೂಷಿಸುವ ಅಸೂಯೆವರರಿಗೆ ನನ್ನ ಜ್ಞಾನವು ಲಭ್ಯವಾಗುವುದಿಲ್ಲ ಎಂಬ ಮಾತು ಇಲ್ಲಿ ಜ್ಞಾಪಕ ಬರುತ್ತಿದೆ. 'ದೇವರ ಮೇಲೆ ಅಸೂಯೆ ಹೊಂದಿ ಜ್ಞಾನದ ಮೇಲೆ ಪ್ರೇಮ ಉಂಟಾದಷ್ಟು ಮಾತ್ರಕ್ಕೆ ಅವರಿಗೆ ಜ್ಞಾನವು ಲಭ್ಯವಾಗುವುದಿಲ್ಲ' ಎಂಬ ವಾಕ್ಯವು ಇಂತಹ ಕಡೆ ನೆರವೇರುತ್ತದೆಂದು ಅರ್ಥವಾಗುತ್ತದೆ. ವಾಸ್ತವವಾಗಿ ಕೃಷ್ಣನು, ಯೇಸು ಇಬ್ಬರು ಒಂದೇ ಎಂದು ಹೇಳಿಕೊಳ್ಳುತ್ತಾ, ನಾವು ಎಷ್ಟೋ ಆಧಾರಗಳನ್ನು ತೋರಿಸುತ್ತಾ ಬಂದಿದ್ದೇವೆ. ಇಲ್ಲಿಗೆ ಬಂದ ನಂತರ ಇತ್ತ ಕೃಷ್ಣನು, ಅತ್ತ ಯೇಸು ಅದೇ ಕೆಲಸವಾಗಿ ಇಬ್ಬರೂ ಮುಂಬರುವವನನ್ನು ಕುರಿತು ಬೇರೆಬೇರೆ ಹೆಸರುಗಳನ್ನು ಹೇಳಿದ್ದಾರೆ. ಇಲ್ಲಿ ಹಾಗೆ ಹೇಳಬೇಕಾಗಿರುವ ಕೆಲಸ ಯಾಕೆ ಬಂದಿದೆ ಎಂದು ಯೋಚಿಸಿದರೇ, ಅವಿಶ್ವಾಸಿಗಳಿಗೆ ತಮ್ಮ ಜ್ಞಾನವು ದೊರೆಯಬಾರದೆಂದು, ಅವರಿಗೆ ಇವರ ಮೇಲೆ ಅನುಮಾನ ಬಂದು ಅವರಿಬ್ಬರು ಒಂದಲ್ಲವೆಂದು ನಿರ್ಣಯಿಸಿಕೊಳ್ಳುವುದಕ್ಕೆ ಹಾಗೆ ಹೆಸರುಗಳನ್ನು ಮೊದಲೇ ಹೇಳಿದ್ದಾರೆಂದು

ತಿಳಿಯುತ್ತಿದೆ. ಕೃಷ್ಣನು ಮೇಧಾವಿ ಆಗಿರುವುದರಿಂದ, ತನಗೆ ಇಷ್ಟವಿಲ್ಲದವರನ್ನು ದೂರ ಮಾಡುವುದಕ್ಕೆ ಎಣೆದ ಪಥಕವೇ ಮೂರನೆಯವನ ಹೆಸರನ್ನು ಎರಡು ವಿಧಗಳಾಗಿ ಹೇಳುವುದೆಂದು ಅರ್ಥವಾಗುತ್ತಿದೆ. ಈ ಹೆಸರುಗಳು ಅಜ್ಞಾನಿಗಳಿಗೆ, ಅವಿಶ್ವಾಸಿಗಳಿಗೆ ಹೊರತು ಜ್ಞಾನಿಗಳಿಗೆ, ವಿಶ್ವಾಸಿಗಳಿಗೆ ಅವಶ್ಯವಿಲ್ಲ.

ಮೂರನೆಯ ಅವತಾರವಾಗಿ ಮುಂಬರುವವನು ಆದರ್ಶಕರ್ತ ನಾದರೂ, ಆದರಣ ಕರ್ತನಾದರೂ ಸೃಷ್ಠಿಕರ್ತನಲ್ಲಿನ ಭಾಗವೇ ಆಗುತ್ತದೆ. ಆದರಣಕರ್ತ, ಆದರ್ಶಕರ್ತ ಎಂಬ ಹೆಸರುಗಳು ಅಜ್ಞಾನಿಗಳಿಗಾಗಿ ಕೃಷ್ಣನು, ಯೇಸು ಬುದ್ಧಿವಂತಿಕೆಯಿಂದ ಹೇಳಿದ್ದಾರೆ. ಅಜ್ಞಾನಿಗಳಿಗೆ ಅನುಮಾನ ಬರುವುದಕ್ಕೆ, ಆ ಅನುಮಾನವು ದೊಡ್ಡಭೂತವಾಗಿ ಜ್ಞಾನಮಾರ್ಗಕ್ಕೆ ಆತಂಕ ಏರ್ಪಡಿಸುವುದಕ್ಕೆ ಉದ್ದೇಶ ಪೂರ್ವಕವಾಗಿ ಕೃಷ್ಣನು, ಯೇಸು ಎರಡು ಹೆಸರುಗಳನ್ನು ಹೇಳಿದ್ದಾರೆ. ಆ ಹೆಸರುಗಳು ಅಜ್ಞಾನಿಗಳ ಮೇಲೆ ಪ್ರಭಾವ ತೋರುವುದು, ಜ್ಞಾನಿಗಳು ಆ ಹೆಸರುಗಳ ಮಾಯೆಯಲ್ಲಿ ಸಿಲುಕಿಕೊಳ್ಳದೇ ಒಂದು ನಿರ್ಣಯಕ್ಕೆ ಬರುತ್ತಾರೆ. ಕೃಷ್ಣ ಹಾಗೂ ಯೇಸು ಹೇಳಿರುವ ಎರಡು ಹೆಸರುಗಳನ್ನು ಒಂದೇ ಹೆಸರಾಗಿ ಬದಲಾಯಿಸಿಕೊಳ್ಳುತ್ತಾರೆ ಅದು ಹೇಗೆ ಎಂದರೇ! ಕೃಷ್ಣನು ಹೇಳಿರುವ “ಆದರ್ಶಕರ್ತ”ನಲ್ಲಿಯೂ, ಯೇಸು ಹೇಳಿರುವ “ಆದರಣಕರ್ತ”ನಲ್ಲಿಯೂ ಸಮಾನವಾಗಿರುವ ಅಕ್ಷರಗಳು, ಸಮಾನವಾಗಿಲ್ಲದ ಅಕ್ಷರಗಳು ಇವೆ. ಎರಡರಲ್ಲೂ ಸಮಾನವಾಗಿರುವ ಅಕ್ಷರಗಳು ಆ..ಕರ್ತ, ಎರಡರಲ್ಲು ಸಮಾನವಾಗಿ ಇಲ್ಲದಿರುವವು ದರ್ಶ, ದರಣ. ಎರಡು ಹೆಸರುಗಳಲ್ಲಿಯು ಸಮಾನವಾಗಿ ಇಲ್ಲದ ಅಕ್ಷರಗಳನ್ನು ತೊಲಗಿಸಿ ನೋಡಿದರೇ ಎರಡರಲ್ಲು “ಆಕರ್ತ” ಮಾತ್ರ ಉಳಿಯುವುದು. ಇದರಪ್ರಕಾರ ಜ್ಞಾನಿಗಳಾದವರು ಮೂರನೆಯ ಅವತಾರದಲ್ಲಿ ಬರುವವನನ್ನು “ಆಕರ್ತ” ಎಂಬ ಹೆಸರಿನಿಂದ ಹೇಳಿಕೊಂಡರೇ ಸರಿಹೋಗುತ್ತದೆ. “ಆಕರ್ತ” ಎಂಬ ಪದವು ಕೃಷ್ಣನು ಹೇಳಿರುವುದಕ್ಕೆ, ಯೇಸು ಹೇಳಿರುವುದಕ್ಕೆ ಸರಿಹೋಗುತ್ತದೆ. ಎರಡು ಹೆಸರುಗಳನ್ನು ಸೋಸಿದರೇ ಬಂದಿರುವುದು “ಆಕರ್ತ” ಇನ್ನು ಆತನು ಬಂದರೇ ಹೇಗಿರುತ್ತದೋ?

ಮೂರನೆಯ ಅವತಾರವು ಕೃಷ್ಣನ ಲೆಕ್ಕದಲ್ಲಿ "ಆದರ್ಶಕರ್ತ", ಯೇಸು ಲೆಕ್ಕದಲ್ಲಿ "ಆದರಣಕರ್ತ" ಇಂದಿನಿಂದ ನಮ್ಮ ಲೆಕ್ಕದಲ್ಲಿ "ಆಕರ್ತ". ಕೃಷ್ಣನು, ಯೇಸು ಇಬ್ಬರು ಹೇಳಿರುವ ಎರಡು ಹೆಸರುಗಳಲ್ಲಿಯು ದರ್ಶ, ದರಣ ಎಂಬ ಶಬ್ಧಗಳನ್ನು ತೆಗೆದುಹಾಕಿದರೇ ಉಳಿದಿರುವುದು ಆಕರ್ತ. ಆದಕಾರಣ ಆಕರ್ತ ಎಂಬ ಹೆಸರು ಇಬ್ಬರು ಹೇಳಿರುವುದಕ್ಕೆ ಸಂಬಂಧಿಸಿರುವುದೇ ಎಂದು ಅಂದುಕೊಳ್ಳಬೇಕು. ಭಗವಂತನ ಮೂರನೆಯ ಬರುವಿಕೆಯಲ್ಲಿ ಒಂದುಬಾರಿ ದೈವಧರ್ಮಗಳ ಪ್ರಚಾರ ಕಾರ್ಯವು ಪೂರ್ತಿಯಾಗುವುದು. ಇದನ್ನನುಸರಿಸಿ

**"ದೇವರು ಮೂರು ಆತ್ಮಗಳಾಗಿ (ಜೀವಾತ್ಮ, ಆತ್ಮ, ಪರಮಾತ್ಮಗಳಾಗಿ) ಇದ್ದಾನೆ." ಎಂದು ತಿಳಿಯುತ್ತಿದೆ.**

**"ಭಗವಂತನು ಮೂರು (ಕೃಷ್ಣ, ಯೇಸು, ಆಕರ್ತ) ಅವತಾರಗಳಾಗಿ ಇದ್ದಾನೆ." ಎಂದು ತಿಳಿಯುತ್ತಿದೆ.**

**"ಮನುಷ್ಯ ಮೂರು ಮಾಯೆಗಳಾ(ತಾಮಸ, ರಾಜಸ, ಸತ್ವಗುಣಗಳಾ)ಗಿ ಇದ್ದಾನೆ." ಎಂದು ತಿಳಿಯುತ್ತಿದೆ.**

ಮೂರು ಮಾಯೆಗಳಲ್ಲಿ ಸಿಲುಕಿಕೊಂಡ ಮನುಷ್ಯನಿಗೆ ದೈವ ಧರ್ಮಗಳನ್ನು ತಿಳಿಸುವುದಕ್ಕೆ, ಮೂರು ಅವತಾರಗಳಾಗಿ ಭಗವಂತನು ಬಂದು, ಮೂರು ಆತ್ಮಗಳ ತ್ರೈತವನ್ನು (ಭಗವದ್ಗೀತೆ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ 16, 17 ಶ್ಲೋಕಗಳ ಭಾವವನ್ನು) ತಿಳಿಸುತ್ತಿದ್ದಾನೆ. ಆದ್ದರಿಂದ ಭಗವಂತನನ್ನು ಒಂದು ಅವತಾರಕ್ಕೆ ಪರಿಮಿತಿ ಮಾಡಬಾರದು. ಎರಡು ಮೂರು ಸಾವಿರ ವರ್ಷಗಳ ವ್ಯತ್ಯಾಸದಿಂದ ಆತನ ಮೂರು ಅವತಾರಗಳು ಮುಗಿದುಹೋಗುತ್ತವೆ. ಆ ಲೆಕ್ಕ ಪ್ರಕಾರ ಐದು ಆರು ಸಾವಿರ ವರ್ಷಗಳಲ್ಲಿಯೇ ಭಗವಂತನ ಮೂರು ಬರುವಿಕೆಗಳು ಒಂದುಬಾರಿ ಮುಗಿದು ಹೋಗುವವು. ಹಾಗೆ ಒಂದುಬಾರಿ ಮೂರು ರೂಪಗಳಿಂದ ಬಂದ ಭಗವಂತನು ಪ್ರತಿಷ್ಠಿಸಿದ ಧರ್ಮಗಳು ಸುಮಾರು ಹತ್ತು ಯುಗಗಳ ಕಾಲಕ್ಕೆ ಪುನಃ ಅಧರ್ಮಗಳಾಗಿ ಬದಲಾಗಬಹುದು. ಆಗಲೂ ಪುನಃ ಭಗವಂತನ ಅವಶ್ಯವು ಏರ್ಪಡಬಹುದು. ಪ್ರಸ್ತುತ ಧರ್ಮಪ್ರತಿಷ್ಠಾಪನೆ

ಕಾರ್ಯಕ್ರಮದಲ್ಲಿ ಭಗವಂತನ ಎರಡು ಅವತಾರಗಳು ಬೇರೆಬೇರೆ ದೇಶಗಳಲ್ಲಿ, ಬೇರೆಬೇರೆ ಹೆಸರುಗಳಿಂದ, ಬೇರೆಬೇರೆ ಮತಗಳಲ್ಲಿ ಬಂದು ಹೋಗಿವೆ. ಇನ್ನು ಉಳಿದಿರುವುದು ಕೃಷ್ಣನು ಹೇಳಿರುವ ಆದರ್ಶಕರ್ತ, ಯೇಸು ಹೇಳಿರುವ ಆದರಣಕರ್ತ, ನಾವು ಹೇಳಿರುವ ಆಕರ್ತನ ಅವತಾರ. ಮೂರನೆಯ ಅವತಾರವು ಮುಖ್ಯವಾದುದಾಗಿ ಇರುತ್ತದೆ. ಏಕೆಂದರೇ! ಕೃಷ್ಣನು ಗೀತೆ ರೂಪದಲ್ಲಿ ಹೇಳಿರುವ ಜ್ಞಾನವಾಗಲೀ, ಯೇಸು ವಾಕ್ಯ ರೂಪದಲ್ಲಿ ಹೇಳಿರುವ ಜ್ಞಾನವಾಗಲೀ ಇಲ್ಲಿಯವರೆಗು ಯಾರಿಗೂ ಅರ್ಥವಾಗಲಿಲ್ಲ. ಅರ್ಥವಾಗಲಿಲ್ಲವೆಂದು ಹೇಳುವುದಕ್ಕೆ ಆಧಾರ ಆ ಎರಡು ಜ್ಞಾನಗಳು ಎರಡು ಮತಗಳಾಗಿ ಬದಲಾಗಿಹೋಗಿವೆ. ಮತ ಎಂದಿಗೂ ದೇವರನ್ನು ತಿಳಿಸಲಾರದು. ದೇವರು ಹೇಳಿರುವ ಜ್ಞಾನವು, ಮತದ ನೆರಳಿನಲ್ಲಿ ಎಂದಿಗೂ ಅರ್ಥವಾಗುವುದಿಲ್ಲ. ಆದ್ದರಿಂದ **"ಮತಾಭಿಮಾನಿಗಳು ಎಂದಿಗೂ ಜ್ಞಾನಾಭಿಮಾನಿಗಳು ಆಗಲಾರರು"** ಎಂಬ ಸೂತ್ರದ ಪ್ರಕಾರ, ಯಾವ ಮತದಲ್ಲಾದರೂ ಮತವನ್ನು ಕುರಿತು ದೊಡ್ಡದಾಗಿ ಹೇಳಿಕೊಳ್ಳುವವನಾಗಲೀ, ಮತವ್ಯಾಪ್ತಿ ಮಾಡಬೇಕೆಂದು ಕೊಳ್ಳುವವನಾಗಲೀ, ದೇವರ ಜ್ಞಾನವನ್ನು ತಿಳಿಯಲಾರನು.

ಭಗವಂತನು ಎರಡುಬಾರಿ ಭೂಮಿಮೇಲೆ ಬಂದು ದೈವಧರ್ಮಗಳನ್ನು ಎರಡು ದೇಶಗಳಲ್ಲಿ ತಿಳಿಸಿಹೋದರೂ, ಇಂದಿಗೂ ಕೂಡಾ ಅವುಗಳ ಸಾರಾಂಶವು ತಿಳಿಯಲಾಗಲಿಲ್ಲ. ಮತಗಳ ಪ್ರಭಾವ ಹೆಚ್ಚಾಗಿರುವ ಈ ಕಾಲದಲ್ಲಿ, ದೈವಕ್ಕಿಂತ ಧನವನ್ನೇ ಹೆಚ್ಚು ಬೆಲೆಯಿಂದ ನೋಡುವ ಈ ಕಾಲದಲ್ಲಿ, ಭಗವಂತನ ಮೂರನೆಯ ಬರುವಿಕೆ ಬರಬೇಕಾಗಿದೆ. ಭಗವಂತನ ಮೂರನೆಯ ಬರುವಿಕೆಯಲ್ಲಿ ಭಗವಂತನು ಹೆಚ್ಚು ಮತಮೂರ್ಖರಿಂದ ತೊಂದರೆ ಪಡಬೇಕಾಗಿರುತ್ತದೆ. ಅಷ್ಟೇ ಅಲ್ಲದೆ ಇಲ್ಲಿಯವರೆಗೂ ಉಳಿದುಕೊಂಡಿರುವ ಧರ್ಮಗಳನ್ನು ಸಹ ತಿಳಿಸಬೇಕಾಗಿದೆ. ಒಂದುಕಡೆ ಮಾಯಾ ಪ್ರಭಾವದಿಂದ ಚೆನ್ನಾಗಿ ಪ್ರಚಾರವಾದ, ಕೆಲವು ಲಕ್ಷ ಜನರ ಅಭಿಮಾನವನ್ನು ಪಡೆದ ಗುರುಗಳ ಮಧ್ಯದಲ್ಲಿ, ಅವರಿಗೆ ವಿರುದ್ಧವಾದ ಧರ್ಮಗಳನ್ನು ವಿವರಿಸಬೇಕಾಗಿದೆ. "ಆಕರ್ತ" ತಿಳಿಸುವ

ಧರ್ಮಗಳು ಇತ್ತ ನಾಸ್ತಿಕರಿಗಾಗಲೀ, ಅತ್ತ ಆಸ್ತಿಕರಿಗಾಗಲೀ ಹಿಡಿಸುವುದಿಲ್ಲ. ಮೂರನೆಯ ಅವತಾರವಾದ ಆಕರ್ತ ಬೋಧನೆಗಳು ಕೆಲವರಿಗೆ ಅರ್ಥವಾಗದಿರುವವಾಗಿ, ಈತನು ದೇವರಿದ್ದಾನೆಂದು ಆಸ್ತಿಕತ್ವವನ್ನು ಬೋಧಿಸುತ್ತಿದ್ದಾನಾ? ಅಥವಾ ದೇವರಿಲ್ಲವೆಂದು ನಾಸ್ತಿಕತ್ವವನ್ನು ಬೋಧಿಸುತ್ತಿದ್ದಾನಾ? ಎಂದು ಅಂದುಕೊಳ್ಳುವರು. ಇನ್ನೂಕೆಲವರು ಮೂರನೆಯ ರೂಪದಲ್ಲಿ ಭಗವಂತನು ಹೇಳುವ ಬೋಧನೆಗಳನ್ನು ಅರ್ಥಮಾಡಿಕೊಳ್ಳಲಾರದೆ ಅವಗಾಹನೆ ಲೋಪದಿಂದ, ಈತನು ಪರಮತವನ್ನು ಬೋಧಿಸುತ್ತಿದ್ದಾನಾ? ಅಥವಾ ಸ್ವಮತವನ್ನು ಬೋಧಿಸುತ್ತಿದ್ದಾನಾ? ಎಂದು ಅರ್ಥವಾಗದ ಸ್ಥಿತಿಯಲ್ಲಿ ಆತನನ್ನು ಕುರಿತು ಚರ್ಚಿಸಿಕೊಳ್ಳುವರು. ಹೊರಗಿನ ಗುರುಗಳನ್ನು ಹೋಲಿಸಿ ನೋಡಿದರೇ ಅವರ ಬಳಿ ಲಕ್ಷಾಂತರ ಜನರು ಸೇರಿ ದೊಡ್ಡದಾಗಿ ಕಾಣಿಸುತ್ತಿದ್ದರೇ, ಅವರಿಗಿಂತ ಎಲ್ಲಾ ವಿಧಗಳಲ್ಲಿ ಕಡಿಮೆಯಾಗಿ ಕಾಣಿಸಿ, ಜ್ಞಾನದಲ್ಲಿ ಗುರುಗಳೆಲ್ಲರಿಗಿಂತಲೂ ದೊಡ್ಡದಾಗಿ ಕಾಣಿಸುವನು. ದೇಶದಲ್ಲಿನ ಗುರುಗಳು, ಗುರು ಶಿಷ್ಯರು ಯಾವುದೋ ಒಂದು ಸಾಧನೆ ಮಾಡಿ ಮೋಕ್ಷವನ್ನು ಪಡೆಯಬೇಕೆಂದು ಪ್ರಯತ್ನ ಮಾಡುತ್ತಿರುವಾಗ, ಆಕರ್ತ ಮಾತ್ರ ದೇವರ ಜ್ಞಾನವನ್ನು ತಿಳಿದುಕೊಳ್ಳುವುದು ಮುಖ್ಯವಾದ ಕೆಲಸ, ಧ್ಯಾನ ಮಾಡುವುದು ವ್ಯರ್ಥವಾದ ಕೆಲಸವೆಂದು ಬೋಧಿಸುವನು. ಭೂಮಿಮೇಲೆ ಗುರುಗಳು ಅವರವರ ಮತಸಂಪ್ರದಾಯಗಳನ್ನು ಅವರು ಅನುಸರಿಸುತ್ತಾ, ಅವರ ಶಿಷ್ಯರನ್ನು ಅನುಸರಿಸುವಂತೆ ಮಾಡುತ್ತಿರುವಾಗ, ಆಕರ್ತ ಮಾತ್ರ ಎಲ್ಲ ಮತಗಳವರನ್ನು ಒಂದೇ ದೇವರ ಜ್ಞಾನದ ಕೆಳಗೆ ತಂದು, ನನ್ನದು ಇಂತಹ ಮತವೆಂದು ಹೇಳದೆ, ಎಲ್ಲರದು ಒಂದೇ ಮತವೆನ್ನುವಂತೆ ಮಾಡುವನು. ಎಲ್ಲ ಮತಗಳವರು ಆಕರ್ತಬಳಿ ಏಕಮತವಾಗಿ ಪ್ರವರ್ತಿಸುತ್ತಾರೆ. **"ಒಂದೇ ಜ್ಞಾನ, ಒಂದೇ ದೇವರು"** ಎಂಬ ಸೂತ್ರಕ್ಕೆ ಬದ್ಧರಾಗಿ ಇರುತ್ತಾರೆ.

ಸೃಷ್ಠಿ ಮೊದಲ ಕಾಲದಲ್ಲಿ ಮನುಷ್ಯರಲ್ಲಿ ಮತವೆನ್ನುವುದು ಇಲ್ಲ. ನಂತರ ಕಾಲದಲ್ಲಿ ಮಾಯೆ ಪ್ರಭಾವದಿಂದ ಮನುಷ್ಯನ ಮೇದಸ್ಸಿನಲ್ಲಿ

ಮತವೆನ್ನುವುದು ಮುಖ್ಯ ಸ್ಥಾನವನ್ನು ಆಕ್ರಮಿಸಿದೆ. ಆಕರ್ತ ದೃಷ್ಠಿಯಲ್ಲಿ ಮನುಷ್ಯನನ್ನು ದೇವರ ಮಾರ್ಗದಿಂದ ತಪ್ಪಿಸುವುದು ಮತವೆಂದು, ಮೊದಲು ತನ್ನ ಜ್ಞಾನವನ್ನು ಪ್ರಾರಂಭಿಸುವುದರಲ್ಲಿ ಮತವನ್ನು ನಿರ್ಮೂಲಿಸುವುದೇ ಧ್ಯೇಯವಾಗಿ ಇಟ್ಟುಕೊಳ್ಳುವನು. ಮತವಿಲ್ಲದ ಮನುಷ್ಯನಾಗಿ ಯಾರು ಬದಲಾಗಬಲ್ಲನೋ ಅವನು ನನ್ನವನೆಂದು ಆಕರ್ತ ಹೇಳುವನು. ಇಲ್ಲಿ ನಿಮಗೆ ಒಂದು ಪ್ರಶ್ನೆ ಬರಬಹುದು. ಅದೇನೆಂದರೇ! ಮುಂಬರುವ ಭಗವಂತನ ಮೂರನೆಯ ಅವತಾರದ ಹೆಸರು "ಆಕರ್ತ" ಅಥವಾ "ಆದರ್ಶಕರ್ತ" ಅಥವಾ "ಆದರಣಕರ್ತ" ಎಂದು ಹೇಳಿಕೊಂಡಿದ್ದೇವೆ. ಆಕರ್ತ ಬರುತ್ತಾನೆಂದು ನೀವೇ ಹೇಳಿದ್ದೀರ. ಆಕರ್ತ ಬಂದ ನಂತರ ಉಳಿದಿರುವ ಧರ್ಮಗಳನ್ನು ಬೋಧಿ ಸುವನು, ಮೊದಲು ಬೋಧಿಸಿರುವ ಧರ್ಮಗಳನ್ನು ವಿವರಿಸುತ್ತಾನೆಂದು ಹೇಳಿದ್ದೀರ. ಈಗೇನೋ ಆತನು ಬರುವ ಮೊದಲೇ ಆತನು ಈ ವಿಧವಾಗಿ ತನ್ನ ಬೋಧನೆಗಳನ್ನು ಹೇಳುವನೆಂದು, ಈ ವಿಧವಾಗಿ ಮತಗಳಿಂದ ಮನುಷ್ಯನ ದೃಷ್ಠಿಯನ್ನು ದೇವರಕಡೆ ಮರಳಿಸುತ್ತಾನೆಂದು, ಮತಗಳಿಲ್ಲದ ಮನುಷ್ಯರನ್ನು ತಯಾರಿ ಮಾಡುವನೆಂದು ಹೇಳುತ್ತಿದ್ದೀರ. ಈ ವಿಷಯಗಳೆಲ್ಲವನ್ನು ಆಕರ್ತ ನಿಮಗೆ ನಿದ್ರೆಯಲ್ಲಿ ಕನಸಿನಲ್ಲಿ ಹೇಳಿದ್ದಾನಾ? ಎಚ್ಚರದಲ್ಲಿದಾಗ ಕಿವಿಯಲ್ಲಿ ಹೇಳಿದ್ದಾನಾ? ಎಂದು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೇ! ನನಗೆ ಆಕರ್ತ ಕಿವಿಯಲ್ಲಿ ಹೇಳಲಿಲ್ಲ, ಕನಸಿನಲ್ಲು ಹೇಳಲಿಲ್ಲ, ಆಕರ್ತನಾಗಿ ಮುಂಬರುವ ಕೃಷ್ಣನು ಆಕರ್ತನನ್ನು ಕುರಿತು ಬೇಟೆಗಾರನಿಗೆ ಕೆಲವು ವಿಷಯಗ ಳನ್ನು ಹೇಳಿಹೋಗಿದ್ದಾನೆ. ಆ ವಿಷಯಗಳನ್ನೇ ಬೇಟೆಗಾರನ ಆತ್ಮ ನನಗೆ ಹೇಳಿರುವಾಗ, ನಾನು ನಿಮಗೆ ಹೇಳುತ್ತಿದ್ದೇನೆ ಹೊರತು ಸ್ವತಃವಾಗಿ ನಾನು ಹೇಳಲಿಲ್ಲ. ಈ ನನ್ನ ಮಾತುಗಳನ್ನು ಕೇಳಿದ ನಂತರ ಕೂಡಾ ಬುದ್ಧಿಯಲ್ಲಿ ಚುರುಕುತನವಿರುವವರು, ದೊಡ್ಡದಾಗಿ ಮೆದುಳನ್ನು ಉಪಯೋಗಿಸುವವರು ಕೆಲವರು ಇನ್ನೊಂದು ವಿಧವಾಗಿ ಕೂಡಾ ಕೇಳಬಹುದು. ಅದೇನೆಂದರೇ! ಭಾರತ, ಭಾಗವತಗಳಲ್ಲಿ ಕೂಡಾ ಹೇಳದ ಬೇಟೆಗಾರನ ಪಾತ್ರವನ್ನು ನೀವೆ ಕಲ್ಪಿಸಿ, ಕೃಷ್ಣನು ಬೇಟೆಗಾರನಿಗೆ ಹೇಳಿದ್ದಾನೆಂದು, ಬೇಟೆಗಾರನ ಆತ್ಮ ನನಗೆ

ಹೇಳಿದೆಯೆಂದು ನಂಬಿಸಿ ನಿಮ್ಮ ಸ್ವಂತ ಭಾವನೆಗಳನ್ನು ನಮಗೆ ಹೇಳುತ್ತಿದ್ದೀರ ಹೊರತು ಕೃಷ್ಣನು ಬೇಟೆಗಾರನಿಗೆ ಹೇಳಲಿಲ್ಲ, ಬೇಟೆಗಾರ ನಿನಗೆ ಹೇಳಲಿಲ್ಲವೆಂದು ನನ್ನನ್ನು ನಿಲ್ಲಿಸಿ ಕೇಳಬಹುದು. ಅದಕ್ಕೆ ನನ್ನ ಉತ್ತರವೇನೆಂದರೇ!

ಪೂರ್ವದಲ್ಲಿ ಹಿರಿಯರು, ಒಂದು ಗಾದೆಯನ್ನು ಹೇಳುತ್ತಿದ್ದರು, **"ಹೊಟ್ಟೆ ಸೀಳಿಸಿಕೊಂಡರೂ ಗಾರುಡಿವಿದ್ಯೆ ಎನ್ನುವವರಿರುತ್ತಾರೆ."** ಎಂದು ಹಿರಿಯರು ಹೇಳಿರುವ ಗಾದೆ ಇಲ್ಲಿ ನನಗೆ ಜ್ಞಾಪಕ ಬಂದಿದೆ. ಅಷ್ಟೇಅಲ್ಲದೆ **"ಅತಿ ಬುದ್ಧಿವಂತಿಕೆ ದುಡುಕಿನ ಲಕ್ಷಣ"** ಎಂದು ಕೂಡಾ ಹಿರಿಯರೆನ್ನುತ್ತಿದ್ದರು. ಯಾವುದಕ್ಕಾದರೂ ಒಂದು ಪರಿಮಿತಿ ಇದ್ದರೇ ಚೆನ್ನಾಗಿರುತ್ತದೆ. ಆದ್ದರಿಂದ ಗೀತೆಯಲ್ಲಿ ಕೃಷ್ಣನು ಕೂಡಾ **'ಮಿತವಾದ ನಿದ್ರೆ, ಮಿತವಾದ ಆಹಾರ, ಮಿತವಾದ ಕೆಲಸ'** ಎಂದು ಹೇಳಿದ್ದಾನೆ. ಮಿತವಾದ ಕೆಲಸ ಎಂದರೇ ಶರೀರದೊಂದಿಗೆ ಮಾಡುವುದಲ್ಲ. ಬುದ್ಧಿಯೊಂದಿಗೆ ಮಾಡುವ ಕೆಲಸವನ್ನು ಕೂಡಾ ಲೆಕ್ಕಿಸಿಕೊಳ್ಳಬೇಕು. ಆದ್ದರಿಂದ ದೊಡ್ಡವರು 'ಅತಿ ಬುದ್ಧಿವಂತಿಕೆ ದುಡುಕಿನ ಲಕ್ಷಣ' ಎಂದಿದ್ದಾರೆ. ಒಂದು ಪರಿಮಿತಿ ಇಲ್ಲದೇ ಅತಿಯಾಗಿ ಆಲೋಚಿಸಿದರೇ ಅದು ಕೆಟ್ಟದಕ್ಕೆ ದಾರಿ ಯಾಗುತ್ತದೆ. ಎಷ್ಟೋವಿವರವಾಗಿ ಶಾಸ್ತ್ರಬದ್ಧವಾಗಿ ಹೇಳುತ್ತಿದ್ದರೂ ಹೇಳಿರುವದನ್ನು ಕುರಿತು ಇದರಲ್ಲಿ ಒಳ್ಳೆಯದು ಇದೆಯಾ, ಕೆಟ್ಟದಿದೆಯಾ ಎಂದು ತಿಳಿದುಕೊಳ್ಳದೆ, ನನಗೆ ಬುದ್ಧಿಯಿದೆ ಎಂದು ಪ್ರಶ್ನಿಸುವುದು ಕೆಟ್ಟದಕ್ಕೆ ದಾರಿಮಾಡುತ್ತದೆ ಹೊರತು ಒಳ್ಳೆಯದಕ್ಕೆ ದಾರಿ ಮಾಡುವುದಿಲ್ಲ. ವಾಲಿ ಬಾಲದ ಹತ್ತಿರ ಹುಟ್ಟಿದ್ದಾನೆಂದು ರಾಮಾಯಣದಲ್ಲಿ ಬರೆದರೇ ಪ್ರಶ್ನಿಸದವರು, ದ್ರೋಣನು ಕುಡಿಕೆಯಲ್ಲಿ ಹುಟ್ಟಿದ್ದಾನೆಂದು ಭಾರತದಲ್ಲಿ ಹೇಳಿದರೇ ಕೇಳಿ ಪ್ರಶ್ನಿಸದವರು, ಹನುಮಂತನು ಪರ್ವತವನ್ನು ಎತ್ತಿಕೊಂಡು ಬಂದಿದ್ದಾನೆಂದು ಬರೆದರೇ ಅಡ್ಡವಾಗಿ ನಂಬುವವರು, ಭೀಮನು ಗಾಳಿಗೆ ಹುಟ್ಟಿದ್ದಾನೆ, ಕರ್ಣನು ಕಿವಿಯಲ್ಲಿ ಹುಟ್ಟಿದ್ದಾನೆ ಎಂದರೇ ಕೇಳುವವರು ಅಲ್ಲಿ ಪ್ರಶ್ನಿಸದೇ, ಆ ಮಾತುಗಳು ಶಾಸ್ತ್ರಬದ್ಧತೆ ಅಲ್ಲವೆಂದು ತಿಳಿದರೂ ಸುಮ್ಮನೇ ಇದ್ದು, ಇಲ್ಲಿ ನಾನು ಹೇಳಿರುವ ಮಾತುಗಳು ಅಶಾಸ್ತ್ರೀಯ ಅಲ್ಲದಿದ್ದರೂ ಪ್ರಶ್ನಿಸುವುದು ಒಳ್ಳೆಯದಾ? ಎಂದು ಕೇಳುತ್ತಿದ್ದೇನೆ. ಇಂತಹ

ಸಂದರ್ಭದಲ್ಲಿಯೇ ದೊಡ್ಡವರು "ಹೊಟ್ಟೆ ಸೀಳಿಸಿಕೊಂಡರೂ ಗಾರುಡಿ ವಿದ್ಯೆ ಎನ್ನುವವರಿರುತ್ತಾರೆ" ಎಂದು ಹೇಳಿದ್ದಾರೆ.

ಗಾರುಡಿ ವಿದ್ಯೆಯಲ್ಲಿ ಮನುಷ್ಯನನ್ನು ಅಡ್ಡವಾಗಿ ಅರ್ಧಭಾಗಕ್ಕೆ ಗರಗಸದಿಂದ ಕುಯ್ದು ಎರಡು ತುಂಡುಗಳಾಗಿ ಬೇರ್ಪಡಿಸಿ ತೋರಿಸುತ್ತಾರೆ. ಹಾಗೆ ತೋರಿಸಿದಾಗ ಮನುಷ್ಯನ ಸೊಂಟದ ಭಾಗದಿಂದ ಬೇರ್ಪಟ್ಟು ಎರಡು ಭಾಗಗಳಾಗಿ ಕಾಣಿಸುವುದು. ಆದರೇ ಅಲ್ಲಿ ರಕ್ತ ಸೋರುವುದಿಲ್ಲ. ರಕ್ತ ಸೋರಲಿಲ್ಲವೆಂದರೇ ಮನುಷ್ಯ ಎರಡು ತುಂಡುಗಳಾಗಿ ಕತ್ತರಿಸಿ ಹೋಗಿದ್ದಾನೆ ಎನ್ನುವುದು ಅಸತ್ಯ. ನಮಗೆ ತಿಳಿಯದ ಪದ್ಧತಿಯನ್ನು ಉಪಯೋಗಿಸಿ ಅಸತ್ಯವನ್ನು ಸತ್ಯವಾಗಿ ತೋರಿಸುತ್ತಿದ್ದಾರೆ. ಆದರೂ ಅದು ಅಸತ್ಯವೆಂದು ಹೇಳುವುದಕ್ಕೆ ಅಲ್ಲಿ ರಕ್ತ ಸೋರಲಿಲ್ಲ. ಅದು ನಿಜವಲ್ಲವೆಂದು, ಹಾಗೆ ತೋರಿಸುವುದು ಗಾರುಡಿವಿದ್ಯೆಯೊಂದರ ಕೆಲಸವೆಂದು ನಮಗೆಲ್ಲರಿಗೂ ತಿಳಿದಿದೆ. ಮನುಷ್ಯನನ್ನು ಎರಡು ತುಂಡುಗಳಾಗಿ ಮಾಡುವುದು ವೇದಿಕೆಯ ಮೇಲೆ ಗಾರುಡಿವಿದ್ಯೆ ಆಗಿರಬಹುದು. ಅದೇ ನಡು ರಸ್ತೆಯಲ್ಲಿ ಒಬ್ಬರು ಮತ್ತೊಬ್ಬರನ್ನು ಕತ್ತಿಯಿಂದ ಎರಡು ತುಂಡುಗಳು ಮಾಡಿದರೇ ಅಲ್ಲಿ ರಕ್ತ ಸೋರಿಹೋಗುತ್ತದೆ. ತುಂಡುಗಳಾದವನು ಸತ್ತುಹೋಗುತ್ತಾನೆ. ಆಗ ಅದು ಗಾರುಡಿ ವಿದ್ಯೆ ಅಲ್ಲ, ನಡೆದಿರುವುದು ಸತ್ಯವೆಂದು ತಿಳಿಯುತ್ತದೆ. ಹಾಗೆ ನಡೆದಿರುವುದನ್ನು ಗಾರುಡಿವಿದ್ಯೆ ಎಂದು ಯಾಕೆ ಅನ್ನಲಿಲ್ಲವೆಂದರೇ, ತುಂಡುಗಳಾದವನು ಸತ್ತುಹೋಗಿದ್ದಾನೆ. ಅವನಲ್ಲಿ ರಕ್ತ ಸೋರಿ ಹೋಗಿರುವುದರಿಂದ ಅವನು ಸತ್ತುಹೋದನು. ಸಾಯಿಸಿದವನನ್ನು ಕೊಲೆಗಾರ ಎನ್ನುತ್ತೇವೆ. ನಡೆದಿರುವುದನ್ನು ಹತ್ಯೆ ಎನ್ನುತ್ತೇವೆ. ಆಗ ಸಾಯಿಸಿರುವವನು ಗಾರುಡಿಗನಲ್ಲ, ನಡೆದಿರುವುದು ಗಾರುಡಿವಿದ್ಯೆ ಅಲ್ಲ. ಇಷ್ಟು ವಿವರವಾಗಿ ತಿಳಿದಾಗ, ಅದರ ಪ್ರಕಾರವೇ ಶಾಸ್ತ್ರಬದ್ಧವಾಗಿರುವ ವಿಷಯಗಳನ್ನು ನಾವು ಹೇಳಿದಾಗ, ನಮ್ಮ ಮಾತುಗಳು ಸತ್ಯವಾ, ಅಸತ್ಯವಾ ಎಂದು ಯಾಕೆ ತಿಳಿಯಲಿಲ್ಲವೆಂದು ಪ್ರಶ್ನಿಸುತ್ತಿದ್ದೇನೆ. ಕೆಲವು ಆಧಾರಗಳಿಂದ ಯೋಚಿಸಿದರೇ ಯಾವುದು ನಿಜವೋ, ಯಾವುದು ನಿಜವಲ್ಲವೋ ನಿಮಗೇ

ಅರ್ಥವಾಗುತ್ತದೆ. ಎದುರಲ್ಲೇ ಕಾಣಿಸುತ್ತಿದ್ದರೂ ಇಣಿಕಿ ನೋಡುವುದು, ಬಾಗಿ ನೋಡುವುದು, ಎಗಿರಿ ನೋಡುವುದಕ್ಕೆ ಅರ್ಥವೇ ಇಲ್ಲ.

ಈ ಅಧ್ಯಾಯದ ಮೊದಲಿನಲ್ಲಿ **"ಕೃಷ್ಣನ ಮರಣವು ಲೋಕಕ್ಕೆ ಕಣ್ತೆರೆ"** ಎಂದು ಆರಂಭಿಸಿ ಹೇಳಿದ್ದೇವೆ. ನರಕಾಸುರನು ಸತ್ತುಹೋದರೇ ಪ್ರಜೆಗಳಿಗೆ ಸಂತೋಷವಾಗಿದೆ. ಆದರೇ ಇಲ್ಲಿ ಕೃಷ್ಣನು ಸತ್ತುಹೋದರೇ ಲೋಕಕ್ಕೆ ಕಣ್ತೆರೆ ಎಂದು ನಾವು ಹೇಳಲಿಲ್ಲ. ಕೃಷ್ಣನ ಮರಣವು ಲೋಕವನ್ನು ಕಣ್ತೆರೆಸಿದೆಯಾ? ಎಂದಿದ್ದೇವೆ. ಅದನ್ನನುಸರಿಸಿ ಮರಣ ಸಮಯದಲ್ಲಿ ಏನೋ ದೊಡ್ಡ ರಹಸ್ಯವಿದೆಯೆಂದು, ಅದು ತಿಳಿದರೇ ಇಲ್ಲಿಯುವರೆಗು ಕಣ್ಣುಗಳು ಮುಚ್ಚಿಕೊಂಡವರು ಕಣ್ಣು ತೆರೆದುಕೊಳ್ಳುತ್ತಾರೆಂದು ಅರ್ಥವಾಗುತ್ತಿದೆ. ಇಲ್ಲಿ ಮುಖ್ಯವಾದ ಘಟ್ಟವೇನೆಂದರೇ! ಇಲ್ಲಿಯವರೆಗು ಯಾವ ವಿಷಯದಲ್ಲಿ ಕುರುಡರಾಗಿದ್ದೇವೆ? ಇಂದಿನಿಂದ ಯಾವುದರಲ್ಲಿ ದೃಷ್ಠಿ ಇಡಬೇಕು? ಎಂದು ಪ್ರಶ್ನೆ ಬರುತ್ತಿದೆ. ನಮಗೆ ಇಲ್ಲಿಯವರೆಗೂ ಇದ್ದ ಕುರುಡುತನವೇನೋ, ಅದು ಕೃಷ್ಣನ ಮರಣವನ್ನು ತಿಳಿದುಕೊಳ್ಳುವುದರಿಂದ ಹೇಗೆ ದೃಷ್ಠಿ ಬರುತ್ತದೋ, ಎಲ್ಲರೂ ತಿಳಿದುಕೊಳ್ಳಬೇಕು. ಈದಿನವಿರುವ ಪ್ರಪಂಚ ಜನಸಂಖ್ಯೆಯಲ್ಲಿ ಶೇಕಡ 80ರಷ್ಟು ಕ್ರೈಸ್ತರಿದ್ದಾರೆ. ಎರಡನೆಯ ಸ್ಥಾನವನ್ನು ಆಕ್ರಮಿಸಿರುವುದು ಇಸ್ಲಾಮ್ ಮತ. ನಂತರ ಬೌದ್ಧ ಮತ, ಆ ನಂತರ ಹಿಂದೂ ಮತ. ಹಿಂದೂಮತವು ಈದಿನ ಕೊನೆಯ ಸ್ಥಾನದಲ್ಲಿದೆ. ಕೃತಯುಗ, ತ್ರೈತಾಯುಗ ಕಳೆದುಹೋಗಿ ದ್ವಾಪರಯುಗದ ಆರಂಭದಲ್ಲಿ ಹಿಂದೂಮತವು ಪ್ರಪಂಚ ವ್ಯಾಪ್ತವಾಗಿ ಖಂಡಾಂತರಗಳವರೆಗು (ವಿದೇಶಗಳವರೆಗು) ವ್ಯಾಪಿಸಿ ಇರುತ್ತಿತ್ತು. ಈದಿನ ನಾವು ಹಿಂದೂಮತವಾಗಿ ಕರೆದುಕೊಳ್ಳುವುದು ಆದಿನ ಹಿಂದೂಮತವೆಂಬ ಹೆಸರಿನಿಂದ ಇಲ್ಲ. ದ್ವಾಪರಯುಗ ಆರಂಭ ಕಾಲದಲ್ಲಿ "ಮತ" ಎಂಬ ಹೆಸರು ಭೂಮಿಮೇಲೆಯೇ ಇಲ್ಲ. ಅಂದಿನಕಾಲದಲ್ಲಿ "ಪಥ" ಎಂಬ ಹೆಸರಿರುತ್ತಿತ್ತು. ಹಿಂದೂ ಎಂಬ ಪದವು 'ಇಂದೂ' ಎಂಬ ಪದವಾಗಿ, ಅರ್ಥದಿಂದ ಕೂಡಿಕೊಂಡಿರುವುದಾಗಿ ಇರುತ್ತಿತ್ತು. ಆದಿನ ಇಂದೂಪಥ

ಎನ್ನುವುದು ಪ್ರಪಂಚ ವ್ಯಾಪ್ತವಾಗಿ ಇರುತ್ತಿತ್ತು. ಪ್ರಪಂಚದಲ್ಲಿನ ಮನುಷ್ಯರೆಲ್ಲರೂ ನಾವು ಇಂದೂಗಳು ಎಂದು ಹೇಳಿಕೊಳ್ಳುತ್ತಿದ್ದರು. ಪಥವೆಂದರೇ ಮಾರ್ಗವೆಂದು ಅರ್ಥ "ಇಂದೂ" ಎಂದರೇ ಚಂದ್ರ ಎಂದು ಅರ್ಥ. ಜ್ಯೋತಿಷ್ಯಶಾಸ್ತ್ರದ ಪ್ರಕಾರ ಜ್ಞಾನಕ್ಕೆ ಚಂದ್ರನು ಅಧಿಪತಿಯಾಗಿರುವುದರಿಂದ, ಆದಿನ ದೈವ ಜ್ಞಾನವಿರುವವರನ್ನು ಇಂದೂಗಳೆಂದು ಹೇಳುತ್ತಿದ್ದರು. ಜ್ಞಾನಮಾರ್ಗದಲ್ಲಿ ನಡೆಯುವವರೆಲ್ಲರನ್ನು ಜ್ಞಾನಪಥದಲ್ಲಿನವರೆಂದು ಹೇಳುತ್ತಿದ್ದರು. ಆದ್ದರಿಂದ ಜ್ಞಾನಿಗಳು ನಮ್ಮದು ಇಂದೂ ಪಥವೆಂದು ಹೇಳುತ್ತಿದ್ದರು. ನಾವು ಇಂದೂಗಳು, ನಮ್ಮದು ಇಂದೂಪಥವೆಂದು ತಲೆಎತ್ತಿ ಹೇಳಿಕೊಳ್ಳುವ ದಿನಗಳು ಪೂರ್ವ ದಲ್ಲಿದ್ದವು. ಕಾಲಕ್ರಮೇಣ ಮಾಯಾ ಪ್ರಭಾವ ಹೆಚ್ಚಾಗಿ ಹೋಗಿ, ಮನುಷ್ಯರೆಲ್ಲರು ಕುರುಡರಾಗಿ ಹೋಗಿ ಪಥವನ್ನು ಮತವಾಗಿ, ಇಂದೂವನ್ನು ಹಿಂದೂವಾಗಿ ಬದಲಾಯಿಸಿಕೊಂಡಿದ್ದಾರೆ.

ಒಂದಾನೊಂದು ದಿನ ಪ್ರಪಂಚ ವ್ಯಾಪ್ತವಾಗಿರುವ ಇಂದೂಗಳಿಗೆ ಕೇಂದ್ರ ಬಿಂದುವಾಗಿ ಭಾರತ ದೇಶವಿತ್ತು. ದೈವಜ್ಞಾನವು ಮೊದಲು ಭಾರತ ದೇಶದಲ್ಲಿಯೇ ಹುಟ್ಟಿದೆ. ಅದು ಬೆಳೆದು ವಿಶ್ವವ್ಯಾಪ್ತವಾಗಿದೆ. ಆದರೇ ಈದಿನ ಅದು ಇಳಿಕೆಯಾಗಿ ಕೊನೆಗೆ ಭಾರತ ದೇಶದಲ್ಲಿ ಕೂಡಾ 'ಇಂದೂ' ಎಂಬ ಹೆಸರು ಕಾಣ್ಮರೆಯಾಗಿ ಹೋಗಿದೆ. ಭಾರತ ದೇಶದಲ್ಲಿ ಉಳಿದಿರುವ ಕೆಲವುಜನ ತಮ್ಮ ಚರಿತ್ರೆಯನ್ನು ಮರೆತುಹೋಗಿ, ನಾವು ಹಿಂದೂಗಳು ಎಂದು ಅರ್ಥವೇ ಇಲ್ಲದ ಹೆಸರನ್ನು ಹೇಳಿಕೊಳ್ಳುತ್ತಿದ್ದಾರೆ. ದೈವಜ್ಞಾನಕ್ಕೆ ಸಂಬಂಧಿಸಿದ ಇಂದೂ ಎಂಬ ಹೆಸರನ್ನು ಬಿಟ್ಟುಹಾಕಿ, ಭೌಗೋಳಿಕ ಸಂಬಂಧವಾದ ಒಂದು ಪ್ರಾಂತ್ಯದ ಹೆಸರನ್ನು, ಒಂದು ನದಿ ಹೆಸರನ್ನು ಹೇಳಿಕೊಳ್ಳುತ್ತಾ ನಾವು ಹಿಂದೂಗಳು ಎನ್ನುತ್ತಿದ್ದಾರೆ. "ಹಾಗೆ ಹೇಳಿಕೊಳ್ಳುವುದು ತಪ್ಪು. ನಮ್ಮನ್ನು ನಾವು ತಗ್ಗಿಸಿಕೊಂಡು ಹೇಳಿಕೊಳ್ಳುತ್ತಿದ್ದೇವೆ. ನಮ್ಮದು ಉನ್ನತವಾದ ಹೆಸರು, ಉನ್ನತವಾದ ಪಥ" ಎಂದು ನಾವು ಹೇಳಿದರೂ ಕೇಳುವ ಸ್ಥಿತಿಯಲ್ಲಿ ಇಲ್ಲದ ಕಿವುಡರಾಗಿ ಹೋಗಿದ್ದಾರೆ. ನಮ್ಮ ಚರಿತ್ರೆ ಇದು, ನಾವು ಇಂದೂಗಳು, ನಮ್ಮದು ಇಂದೂ ಪಥವೆಂದು

ನಾವು ಒಂದು ಗ್ರಂಥವನ್ನು ಬರೆದು ಉಚಿತವಾಗಿ ಹಂಚಿದರೇ, ಮಹಾನಂದಿಯಲ್ಲಿ ನಾವು ಪರಮತವನ್ನು ಕುರಿತು ಪ್ರಚಾರ ಮಾಡುತ್ತಿದ್ದೇವೆಂದು ನಮ್ಮ ಮೇಲೆ ಕೇಸುಗಳನ್ನಿಟ್ಟು ಕೋರ್ಟಿಗೆ ತಿರುಗಿಸುತ್ತಿದ್ದಾರೆಂದರೇ, ನಮ್ಮದು ಪೂರ್ವದಲ್ಲಿ ಇಂದೂ ಜಾತಿಯೇನಾ ಎಂದು ಅನುಮಾನ ಬಾರದೆ ಇರುವುದಿಲ್ಲ. ಇವು ನಮ್ಮ ಸಂಪ್ರದಾಯಗಳು ಎಂದು **"ಇಂದೂ ಸಂಪ್ರದಾಯಗಳು"** ಎಂಬ ಹೆಸರಿನಿಂದ ಒಂದು ಗ್ರಂಥವನ್ನು ಬರೆದು ಬಿಡುಗಡೆ ಮಾಡಿದರೇ, ಇಂದೂ ಎಂದು ಹೆಸರಿಡುವುದು ತಪ್ಪು ಎಂದು ವಿಶ್ವಹಿಂದೂ ಪರಿಷತ್‌ರವರು ಗುಂತಕಲ್ಲು ಎಂಬ ಊರಿನಲ್ಲಿ ನಮ್ಮ ಮೇಲೆ ಭೌತಿಕ ಹಲ್ಲೆಗಳು ಮಾಡುವುದು ಪರಮತಗಳ ಮುಂದೆ ನಾಚಿಕೆ ಗೇಡು ಅಲ್ಲವೇ! ಕೇಳಿದರೇ ವಿವರವಾಗಿ ನಿಮಗೆ ಅರ್ಥ ವಾಗುವಂತೆ ಹೇಳುತ್ತೇವೆಂದರೂ ಕೇಳದಂತೆ, ನಾವು ಬರೆದಿರುವ **"ತ್ರೈತಸಿದ್ಧಾಂತ ಭಗವದ್ಗೀತೆ"**ಯನ್ನು ತೋರಿಸಿದರೂ, ಆ ಭಗವದ್ಗೀತೆಯನ್ನು ನಡು ರಸ್ತೆಯಲ್ಲಿಯೇ ಹಿಂದೂ ಸಮಾಜದವರೇ ಬೆಂಕಿ ಇಟ್ಟು ಸುಟ್ಟಿದ್ದಾರೆಂದರೇ, ಪೂರ್ವವಿರುವ ಹಿಂದುಗಳ ಆತ್ಮಗಳು ಆ ದೃಶ್ಯವನ್ನು ನೋಡಿ ಅವರನ್ನು ಶಪಿಸದಂತೆ ಬಿಡುವುದಿಲ್ಲವೆಂದೆನಿಸುತ್ತಿದೆ.

ಈ ದಿನ ಸ್ವಲ್ಪವಾದರೂ ಇಂದೂ ಸಂಸ್ಕೃತಿಯನ್ನು ತಿಳಿಯದ ಹಿಂದೂಸಂಸ್ಥೆಗಳು ಅನೇಕವು ಹುಟ್ಟಿಬಂದಿವೆ. ಆ ಸಂಸ್ಥೆಗಳಲ್ಲಿ ಇರುವವರಿಗೆ ಪೂರ್ವವು ಹಿಂದೂಮತವು ವಿಶ್ವವ್ಯಾಪಕವಾಗಿ ಇರುತ್ತಿತ್ತು ಎಂದಾಗಲೀ, ಈಶ್ವರನು ತನ್ನ ತಲೆಯಮೇಲೆ ಅರ್ಧಚಂದ್ರಾಕಾರವನ್ನು ಧರಿಸಿರುವುದರಿಂದ, ನಮಗೆ ಆ ದಿನ ಸಂಪೂರ್ಣ ಜ್ಞಾನವಿರುವುದರಿಂದ, ನಾವು ಇಂದೂಗಳಾಗಿ ಇರುತ್ತಿದ್ದೆವು ಎಂದಾಗಲೀ ತಿಳಿದಿಲ್ಲ. ಇಂದೂಮತ(ಇಂದೂಪಥ)ವೊಂದರ ಹುಟ್ಟು ಪೂರ್ವೋತ್ತರಗಳು (ಪ್ರಾಚೀನ ಸಂಪ್ರದಾಯಗಳು) ತಿಳಿಯದವರು, ಕೃಷ್ಣನು ಹೇಳಿರುವ ಭಗವದ್ಗೀತೆಗೆ ಬೆಲೆಯನ್ನು ಕೊಡದವರು, ನಾವು ಹಿಂದೂಗಳೆಂದು, ಮತವನ್ನು ರಕ್ಷಿಸುವುದಕ್ಕೆ ನಾವು ಸಂಘಗಳಾಗಿ ಏರ್ಪಟ್ಟಿದ್ದೇವೆಂದು ಹೇಳಿಕೊಳ್ಳುತ್ತಿದ್ದಾರೆ. ಹಿಂದೂಮತ ಯಾಕೆ ಕ್ಷೀಣಿಸುತ್ತಿದೆಯೋ, ಅದಕ್ಕಿರುವ

ಕಾರಣವೇನೋ ಸ್ವಲ್ಪವಾದರೂ ಅರ್ಥಮಾಡಿಕೊಳ್ಳುತ್ತಿಲ್ಲ. ಇತರ ಮತಗಳವರು ಅವರ ಪ್ರವಕ್ತರು ಹೇಳಿರುವ ಮಾತುಗಳನ್ನು ಹೇಳಿ, ಅವರ ಮತಗಳನ್ನು ಅಭಿವೃದ್ಧಿ ಮಾಡಿಕೊಳ್ಳುತ್ತಾ ಹೋಗುತ್ತಿದ್ದರೇ, ದಿನದಿನಕ್ಕೂ ಹಿಂದೂಮತ ಕ್ಷೀಣಿಸಿ ಹೋಗುತ್ತಿದೆ. ಹಿಂದೂ ಸಂಸ್ಥೆಗಳು ತಮ್ಮ ಜ್ಞಾನವನ್ನು ತಿಳಿದುಕೊಂಡು, ಜ್ಞಾನವನ್ನು ಬೋಧಿಸಿ ಕ್ಷೀಣಿಸಿ ಹೋಗುತ್ತಿರುವ ಮತವನ್ನು ರಕ್ಷಿಸಿಕೊಳ್ಳಬೇಕು. ಆದರೇ ಹಾಗಲ್ಲದೆ ಪರಮತಗಳ ಮೇಲೆ ಹಲ್ಲೆ ನಡೆಸುತ್ತಾ ಹಿಂದೂಮತವನ್ನು ರಕ್ಷಿಸುತ್ತೇವೆನ್ನುವುದು, ರೋಗಕ್ಕೆ ಔಷಧಿ ಕೊಡದೆ ವಿಷವನ್ನು ಕೊಟ್ಟಂತಾಗುತ್ತದೆ. ನಾವು ಹೇಳುವ ಬೋಧನೆಗಳು ಈದಿನ ಎಷ್ಟೋ ಪ್ರಶಂಸಿಸಲ್ಪಡುತ್ತಿವೆ. ಇದನ್ನು ಮೀರಿದ ಜ್ಞಾನವಿಲ್ಲ ಎಂದು ಪ್ರಜೆಗಳೆಲ್ಲರೂ ಅನ್ನುತ್ತಿರುವಾಗ, ನಮ್ಮ ಜ್ಞಾನವನ್ನು ಯಾವ ಮಾತ್ರ ನೋಡದೆ, ಓದದೇ ನಮ್ಮನ್ನು ಅವಮಾನಪಡಿಸಿದರೇ ಈ ದಿನವಿರುವ ಹಿಂದೂ ಸಮಾಜವು ಕುರುಡದ್ದು ಎನ್ನದೇ ಏನೆನ್ನಬೇಕು?

'ಮತ' ಎಂಬ ಹೆಸರಿನಿಂದ ಅಜ್ಞಾನ ತುಂಬಿದ ಮನುಷ್ಯರು ಗುಂಪುಗಳಾಗಿ ಸೇರಿ, ಹಿಂದುಗಳೇ ಇಂದೂತ್ವಕ್ಕೆ ಸಮಾಧಿಕಟ್ಟುವ ಸಮಯ ಬಂದಿದೆ. ಆದಕಾರಣ ಭಗವಂತನ ಮೂರನೆಯ ಅವತಾರವಾದ ಆಕರ್ತ ಬರುವಿಕೆ ಇಷ್ಟರಲ್ಲಿಯೇ ಇದೆಯೆಂದುಕೊಳ್ಳೋಣ. ಇಂದೂ ಧರ್ಮಗಳಿಗೆ ಪೂರ್ತಿ ಮುಪ್ಪು ಏರ್ಪಟ್ಟ ಈ ಸಮಯದಲ್ಲಿಯೇ, ಭಗವಂತನ ಜನ್ಮ (ಬರುವಿಕೆ) ಇರುತ್ತದೆಂದು ಅಂದುಕೊಳ್ಳುತ್ತಿದ್ದೇವೆ. ಈದಿನ ಹಿಂದೂ ಸಂಘಗಳು ಜ್ಞಾನವಿಲ್ಲದಿರುವವಾದ್ದರಿಂದ, ಈಗಾಗಲೇ ಉತ್ತರಾಂಧ್ರ ಅರ್ಧಕ್ಕೆ ಅರ್ಧ ಹಿಂದೂ ಮತವನ್ನು ಬಿಟ್ಟು ಹೋಗಿದೆ. ಆದಕಾರಣ ಹಿಂದೂಗಳ ಸಂಘಗಳಿಗೆ ಇಂದಿಗಾದರೂ ಕಣ್ತೆರೆಸುವಂತೆ, ಜ್ಞಾನ ಪ್ರಚಾರದಿಂದಲೇ ಹಿಂದೂಮತವು ರಕ್ಷಿಸಲ್ಪಡುತ್ತದೆಯೆಂದು, ಜ್ಞಾನವಿಲ್ಲದೇ ಸಂಘಗಳನ್ನು ಇಟ್ಟುಕೊಂಡು ರಾಜಕೀಯಪಾರ್ಟಿಗಳ ಹಾಗೆ ನಡೆದುಕೊಂಡರೆ ಪ್ರಜೆಗಳು ಛೀಮಾರಿ ಹಾಕಿ ಪರಮತದೊಳಗೆ ಹೋಗುತ್ತಾರೆಂದು ತಿಳಿಯಬೇಕು. ಆದ್ದರಿಂದ ಇಂದಿಗಾದರೂ ಜ್ಞಾನಿಗಳಿಗೆ, ಗುರುಗಳಿಗೆ ಬೆಲೆ ಕೊಟ್ಟು ಅವರ ಸಲಹೆಗಳಿಂದ ಜ್ಞಾನವನ್ನು

ಪ್ರಚಾರಮಾಡಿ, ಅದರ ಮೂಲಕ ಹಿಂದೂತ್ವವನ್ನು ಕಾಪಾಡುವ ಪ್ರಯತ್ನ ಮಾಡಿರೆಂದು ಹೇಳುತ್ತಿದ್ದೇವೆ. ಭವಿಷ್ಯತ್ತಿನಲ್ಲಿ ಪ್ರಜೆಗಳು ಮತಗಳ ಭ್ರಮೆಯಲ್ಲಿ ಮುಳುಗಿಹೋಗಿ, ದೈವತ್ವವನ್ನು ಮರೆತು ಹೋಗುತ್ತಾರೆಂಬ ಉದ್ದೇಶದಿಂದಲೇ ಮತಗಳ ವಿಷಯವನ್ನು ತನ್ನ ಮರಣದಲ್ಲಿ ಕೃಷ್ಣನು ಹೇಳಿ ಹೋಗಿದ್ದಾನೆ.

ಈ ದಿನ ಮತಗಳನ್ನು ಬದಲಾಯಿಸಿಕೊಳ್ಳುವವರಿಗೆ ಕಣ್ತೆರೆಸುವಂತೆ ಉಂಟಾಗುವಂತೆ ಕೃಷ್ಣನು ತನ್ನ ಮರಣದಲ್ಲಿ ಬೇಟೆಗಾರನಿಗೆ ಮುಂಬರುವ ಕ್ರೈಸ್ತ ಮತವನ್ನು ಕುರಿತು ಹೇಳಿ ಅದರ ಪ್ರವಕ್ತನು ನಾನೇ ಎಂದು ಹೇಳಿದ್ದಾನೆ. ಈಗ ನಿಮಗೆ ಅರ್ಥವಾಗುವುದಕ್ಕೆ ನಾವು ಮತವೆಂಬ ಪದವನ್ನು ಬಳಸುತ್ತ ಹೇಳುತ್ತಿದ್ದೇವೆ. ಆದಿನ ಕೃಷ್ಣನು ಮತವೆಂಬ ಹೆಸರನ್ನು ಉಪಯೋಗಿಸಲಿಲ್ಲವೆಂದು ಜ್ಞಾಪಕವಿಟ್ಟುಕೊಳ್ಳಬೇಕು. ಧರ್ಮಗಳನ್ನು ನೆಲೆಗೊಳಿಸುವ ಕಾರ್ಯದಲ್ಲಿ ಮೂರುಬಾರಿ, ಮೂರು ಕಾಲಗಳಲ್ಲಿ ಹೇಳಬೇಕಾಗಿರುವ ಜವಾಬ್ದಾರಿ ಕೃಷ್ಣನಿಗಿದೆ. ಆದ್ದರಿಂದ ಎರಡನೆಯ ಅವತಾರವಾಗಿ ಯೇಸು ಹೆಸರಿನಿಂದ ಬರುತ್ತೇನೆಂದು ಹೇಳಿದ್ದಾನೆ. ಯೇಸು ಹೆಸರಿನಿಂದ ಬಂದು ಅಲ್ಲಿಯೂ ಸಹ ಧರ್ಮಗಳನ್ನು ತಿಳಿಸುತ್ತೇನೆಂದಿದ್ದಾನೆ ಹೊರತು ಒಂದು ಮತವನ್ನು ಸ್ಥಾಪಿಸುತ್ತೇನೆಂದು ಆತನು ಹೇಳಲಿಲ್ಲ. ಯೇಸು ಹೇಳಿರುವ ಬೋಧನೆ ನಾಲ್ಕು ಜನಶಿಷ್ಯರು ಬರೆದಿರುವ ನಾಲಕ್ಕು ಸುವಾರ್ತಗಳ ರೂಪದಲ್ಲಿ ಇದೆ. ಆದರೆ ಪೂರ್ತಿ ಬೈಬಲ್ ರೂಪದಲ್ಲಿ ಇಲ್ಲ. ಆದ್ದರಿಂದ ಈ ಗ್ರಂಥದಲ್ಲಿ ಎಲ್ಲೂ ಬೈಬಲ್ ಎಂಬ ಪದವನ್ನು ಬಳಸಲಿಲ್ಲವೆಂದು ಗ್ರಹಿಸಬೇಕು. ಯೇಸು ಹೇಳಿರುವ ವಾಕ್ಯಗಳನ್ನು ಯಾರು ಗ್ರಹಿಸುವರೋ ಅವನು ನಿಜವಾಗಿ ಯೇಸು ಭಕ್ತನಾಗುವನು. ಯೇಸು ಭಕ್ತನಾದವನು ಕೃಷ್ಣ ಹಾಗೂ ಯೇಸು ಇಬ್ಬರೂ ಒಬ್ಬರೇ ಎಂದು ಗ್ರಹಿಸುವನು. ಹಾಗೆ ಗ್ರಹಿಸದವನಿಗೆ ಯೇಸು ಹೇಳಿರುವ ಜ್ಞಾನವು ಅರ್ಥವಾಗಲಿಲ್ಲವೆಂದು, ಅವನು ಯೇಸು ಭಕ್ತನಲ್ಲವೆಂದು ಅರ್ಥವಾಗುತ್ತದೆ. ಈದಿನ ಯಾರಾದರೂ ನಾನು ಯೇಸುವನ್ನು ವಿಶ್ವಾಸಿಸುತ್ತಿದ್ದೇನೆ ಎಂದರೂ, ಅವನು ನಾನು ಕ್ರೈಸ್ತನು ಎಂದು ಯೇಸು ಕ್ರೈಸ್ತ ದೇವರೆಂದು, ಹಿಂದೂಗಳ ದೇವರು ಬೇರೆಯೆಂದು

ಅಂದುಕೊಳ್ಳುವುದರಿಂದ ಅವನು ಯೇಸುನನ್ನು ವಿಶ್ವಾಸಿಸದವನಲ್ಲವೆಂದು, ಆದಕಾರಣ ನಿಜವಾದ ಕ್ರೈಸ್ತನಲ್ಲವೆಂದು ಅರ್ಥವಾಗುತ್ತಿದೆ. ಇದೆಲ್ಲದಕ್ಕು ಮೂಲ ಕೃಷ್ಣನ ಮರಣದಲ್ಲಿ ನಡೆದ ಸಮಾಚಾರವು ಯಾರಿಗೂ ತಿಳಿಯದೆ ಹೋಗಿರುವುದರಿಂದ, ಕೃಷ್ಣನು ಮೊದಲೇ ಹೇಳಿದಂತೆ ಯೇಸುವಾಗಿ ಬಂದರೂ, ಯೇಸು ನನ್ನ ದೇವರೆನ್ನುತ್ತಾ ಕೃಷ್ಣನನ್ನು ದೂಷಿಸುವವರು ಇದ್ದಾರೆ. ಹಾಗೆ ಯೇಸು ಭಕ್ತರು ಕೃಷ್ಣನನ್ನು ದೂಷಿಸಿದರೇ ಯೇಸುನನ್ನು ದೂಷಿಸಿದಂತೆಯೇ ಆಗುತ್ತದೆ. ಅದೇ ವಿಧವಾಗಿ ಕೃಷ್ಣನ ಭಕ್ತರು ಯೇಸುನನ್ನು ದೂಷಿಸಿದರೂ, ಯೇಸುವೇ ಕೃಷ್ಣನಾದ್ದರಿಂದ ಅವರು ಕೃಷ್ಣನನ್ನು ದೂಷಿಸಿದಂತಾಗುವುದು. ಕೃಷ್ಣನು ಯೇಸುವಾಗಿ ಹುಟ್ಟುತ್ತೇನೆಂದು ಮೊದಲೇ ಹೇಳಿದಂತೆ ತಿಳಿದಿರುವು ದರಿಂದ, ಇತ್ತ ಹಿಂದೂಗಳಿಗೆ ಅತ್ತ ಕ್ರೈಸ್ತರಿಗೆ ಕಣ್ತೆರೆಸಿದಂತಾಗಿ, ಇಂದಿನಿಂದ ತಮ್ಮ ಪ್ರವರ್ತನೆಯನ್ನು ಬದಲಾಯಿಸಿಕೊಂಡು, ಯಾರು ಯಾವ ಮತದಲ್ಲಿದ್ದರೂ ದೇವರೇ ಅದರಲ್ಲಿ ಹುಟ್ಟಿಸಿದ್ದಾನೆಂದು ತಿಳಿದು, ಮತವನ್ನು ಬದಲಾಯಿಸದಂತಿದ್ದು ಕೃಷ್ಣನನ್ನು, ಯೇಸುನನ್ನು ಸಮಾನವಾಗಿ ನೋಡುವ ಹಿಂದೂಗಳು, ಯೇಸುನನ್ನು ಕೃಷ್ಣನನ್ನು ಸಮಾನವಾಗಿ ನೋಡುವ ಕ್ರೈಸ್ತರು ಸಮಾಜದಲ್ಲಿ ತಯಾರಾಗ ಬಲ್ಲರೆಂದು ತಿಳಿಯುತ್ತಿದ್ದೇನೆ. ಯೇಸು ಹೇಳಿರುವ ನಾಲಕ್ಕು ಸುವಾರ್ತೆಗಳನ್ನು ಮಾತ್ರ ಕ್ರೈಸ್ತರು ಓದಬೇಕು. ನಾಲಕ್ಕು ಸುವಾರ್ತೆಗಳೊಂದಿಗೆ ಸಹ ಒಟ್ಟಾರೆ ಬೈಬಲನ್ನು ಓದುವವನು ಯೇಸುನನ್ನು ಗೌರವಿಸದಹಾಗೆಯೇ, ಆತನ ಬೋಧನೆಗಳಿಗೆ ಪ್ರಾಧಾನ್ಯತೆ ಕೊಡದಹಾಗೆಯೇ. ಅಂಥವನು ಕ್ರೈಸ್ತನಲ್ಲ. ಅದೇ ವಿಧವಾಗಿ ಕೃಷ್ಣನು ಹೇಳಿರುವ ಕೇವಲ 17 ಅಧ್ಯಾಯಗಳ ಭಗವದ್ಗೀತೆಯನ್ನು ಹಿಂದೂಗಳು ಓದಬೇಕು. ಗೀತೆಯೊಂದಿಗೆ ಸಹ ವೇದಗಳನ್ನು ಓದಿದರೂ ಅಥವಾ ಗೀತೆಯನ್ನು ಬಿಟ್ಟು ವೇದಗಳನ್ನು ಓದಿದರೂ ಅವನು ಕೃಷ್ಣನನ್ನು ಗೌರವಿಸದಹಾಗೆಯೇ. ಆತನ ಬೋಧನೆಗಳಿಗೆ ಪ್ರಧಾನ್ಯತೆ ಕೊಡದಹಾಗೆಯೇ. ಅಂಥವನು ಹಿಂದೂ(ಇಂದೂ)ಅಲ್ಲ. ಈ ವಿಧವಾಗಿ ಲೆಕ್ಕಿಸಿ ನೋಡಿದರೇ ಈದಿನ ಸರಿಯಾದ ಹಿಂದೂವೇ ಇಲ್ಲ. ಹಾಗೆಯೇ ಸರಿಯಾದ ಕ್ರೈಸ್ತನಿಲ್ಲ. ಆದ್ದರಿಂದ ಈದಿನ ಈ ಗ್ರಂಥವನ್ನು ಓದಿ ಕೃಷ್ಣನ ಮರಣ ಸಮಯದಲ್ಲಿ

ನಡೆದ ರಹಸ್ಯವನ್ನು ಯಾರಾದರೇ ತಿಳಿದುಕೊಳ್ಳುತ್ತಾರೋ ಅವರೆಲ್ಲರಿಗೂ ಕಣ್ತೆರೆದಂತಾಗುತ್ತದೆ. ನಾವು ನಿನ್ನದು ಆ ಮತ, ನನ್ನದು ಈ ಮತವೆಂದು ಹೇಳಿಕೊಳ್ಳುವುದು ಒಂದೇ ವಂಶದಲ್ಲಿ ಹುಟ್ಟಿರುವ ಇಬ್ಬರು ಅಣ್ಣತಮ್ಮಂದಿರು ತಮ್ಮ ವಂಶವನ್ನು ಕುರಿತು ತಿಳಿಯದೆ ಅಣ್ಣ ಒಂದು ವಂಶದ ಹೆಸರು, ತಮ್ಮ ಮತ್ತೊಂದು ವಂಶದ ಹೆಸರು ಹೇಳಿದರೇ ಸ್ವಂತ ತಂದೆಯನ್ನೇ ಬದಲಾಯಿಸಿದಂತಾಗುವುದು ಅಲ್ಲವೇ! ಆದ್ದರಿಂದ ಇಂದಿನಿಂದಾದರೂ ಕೆಲವು ಸಾವಿರ ವರ್ಷಗಳ ಹಿಂದೆ ಏನು ನಡೆದಿದೆಯೆಂದು ಯೋಚಿಸಿ, ತಮ್ಮ ತಮ್ಮ ಮತಗಳು ಪೂರ್ವವು ಇಲ್ಲವೇಇಲ್ಲವೆಂದು ಗ್ರಹಿಸಿ, ಆಗ ಇದ್ದದ್ದು ಒಂದೇ ಒಂದು ಪಥ ಮಾತ್ರವೇ ಎಂದು, ಅದೇ **"ಇಂದೂ ಪಥವೆಂದು"** ತಿಳಿದು, ಇಂದೂ ಪಥದಲ್ಲಿಯೇ ಈದಿನವಿರುವ ಕ್ರೈಸ್ತರು, ಹಿಂದೂಗಳು ಪೂರ್ವದಲ್ಲಿದ್ದವರನ್ನೂ, ಆ ಇಂದೂಪಥವನ್ನೂ ಮರೆತು ಹೋಗಿರುವುದರಿಂದ ಹಿಂದೂಮತವು, ಕ್ರೈಸ್ತಮತವೆಂದು ಬೇರೆಬೇರೆಯಾಗಿ ಸೀಳಿಹೋಗಿವೆಯೆಂದು ತಿಳಿದುಕೊಂಡರೇ, ಇಂದಿಗೂ ಎರಡರಲ್ಲೂ ಒಂದೇ ಬೋಧನೆ ಇದೆಯೆಂದು, ಎರಡನ್ನೂ ತಿಳಿಸಿರುವವನು ಒಬ್ಬನೇ ಭಗವಂತನೆಂದು ತಿಳಿಯಬಲ್ಲದು.

ಮುಂದೆ ನಡೆಯುವಂತಹ ವಿಷಯವನ್ನು ತಿಳಿದ ಕೃಷ್ಣನು ತನ್ನ ಮರಣ ಸಮಯದವರೆಗು ಮುಂಬರುವ ತನ್ನ ಜನ್ಮಗಳನ್ನು ಕುರಿತು ತಿಳಿಸಲಿಲ್ಲ. ಕೊನೆಯ ಮರಣ ಸಮಯದಲ್ಲಿ ಬೇಟೆಗಾರನನ್ನು ಅಡ್ಡಇಟ್ಟುಕೊಂಡು, ಭವಿಷ್ಯತ್ತಿನ ಅವತಾರಗಳನ್ನು ಕುರಿತು ಹೇಳಿದ್ದಾನೆ. ಬೇಟೆಗಾರನು ಕೇಳಿದ್ದನ್ನು ಪುನಃ ಹೇಳುವ ಸಾಮರ್ಥ್ಯ ಇರುವವನಲ್ಲವೆಂದು ತಿಳಿದು ಕೃಷ್ಣನು ಅವನಿಗೇ ಹೇಳಿದ್ದಾನೆ. ಹಾಗೆ ಹೇಳುವುದರಿಂದ ಅವನ ಆತ್ಮ ಆ ವಿಷಯವನ್ನು ಸ್ವೀಕರಿಸಿ, ತನ್ನ ಮೂರನೆಯ ಅವತಾರ ಸಮಯ ಸಮೀಪಿಸಿದಾಗ ಆತ್ಮವೇ ಆ ವಿಷಯವನ್ನು ಹೊರಗೆ ತಿಳಿಸುವಂತೆ ಭಗವಂತನು ನಿರ್ಣಯಿಸಿದ್ದಾನೆ. ಅಷ್ಟರಲ್ಲಿ ಬೆಳೆಯಬೇಕಾದ ಅಜ್ಞಾನವೆಲ್ಲಾ ಬೆಳೆದು, ಮತ ದ್ವೇಷಗಳು ಹೆಚ್ಚಾಗಿ ಮಾನವನು ಆಧ್ಯಾತ್ಮಿಕವೆಂಬ ದಾರಿಯನ್ನು ಬಿಟ್ಟು, ಮಯೆ ದಾರಿಯಲ್ಲಿ ಹೋಗುವಾಗ, ಮೂರನೆಯ

ಪುರುಷನಾಗಿ ಬಂದವನು ತನ್ನ ಜ್ಞಾನವನ್ನು ತಿಳಿಸಿ ಧರ್ಮಗಳನ್ನು ಪೂರ್ತಿಯಾಗಿ ನೆಲೆಗೊಳಿಸುವನು. ಇಲ್ಲಿ ಮುಖ್ಯವಾಗಿ ಗಮನಿಸಬೇಕಾಗಿರುವ ವಿಷಯವೇ ನೆಂದರೇ! ನಾನು ಅನ್ನದಾನ ಮಾಡುತ್ತೇನೆ. ನಾನು ಅನ್ನವನ್ನು ಇಡುವುದರಿಂದ ನಮ್ಮ ಬಳಿಯಿರುವವರೆಲ್ಲಾ ಹಸಿವು ಇಲ್ಲದವರಾಗುತ್ತಾರೆ. ಯಾರಿಗೂ ಹಸಿವು ಇಲ್ಲದಂತೆ ಮಾಡುತ್ತೇನೆಂದಾಗ, ನನ್ನಬಳಿ ಇರುವವರೆಲ್ಲರಿಗೂ ಆಹಾರ ಸಿಗದೆಹೋಗಿ ಪೂರ್ತಿ ಹಸಿದುಕೊಂಡವರಾದಾಗ, ನಾನು ಕೊಟ್ಟಿರುವ ಆಹಾರದಿಂದ ಅವರ ಹಸಿವು ಪೂರ್ತಿಯಾಗಿ ತೀರಿಹೋದರೇ, ಆಗ ನಾನು ಹೇಳಿದಂತೆ ಎಲ್ಲರ ಹಸಿವು ತೀರಿಸಿದಂತಾಗುವುದು. ನಾನು ಅನ್ನವನ್ನು ಮಾಡಿ ಸಿದ್ಧವಾಗಿ ಇಟ್ಟುಕೊಂಡರೂ, ಆ ಸಮಯಕ್ಕೆ ಹಸಿದುಕೊಂಡವರು ಯಾರೂ ಇಲ್ಲದೇ ಹೋದರೇ ನಾನು ಯಾರ ಹಸಿವೂ ತೀರಿಸದಹಾಗೆಯೇ ಅಲ್ಲವೇ! ಆದ್ದರಿಂದ ಎದುರಿಗಿರುವವರು ಹಸಿವಿನಿಂದಿರುವಾಗಲೇ ನನ್ನ ಕಾರ್ಯವು ನೆರವೇರುವುದು. ಅದೇ ವಿಧವಾಗಿಯೇ ದೇವರು ನಾನು ಭಗವಂತನಾಗಿ ಬಂದು ಅಧರ್ಮಗಳನ್ನು ಇಲ್ಲದೇ ಮಾಡುತ್ತೇನೆಂದಿದ್ದಾನೆ. ಆತನ ಕೆಲಸ ಅಧರ್ಮಗಳನ್ನು ಇಲ್ಲದಂತೆಮಾಡಿ ಧರ್ಮಗಳನ್ನು ತಿಳಿಸುವುದಾಗಿರುವಾಗ, ಆತನು ಬಂದಾಗ ಧರ್ಮಗಳೆಂಬ ಆಹಾರ ಇಲ್ಲದೇಹೋಗಿ ಅಧರ್ಮವೆಂಬ ಹಸಿವು ಇರಬೇಕು. ಆಗ ಧರ್ಮಗಳೆಂಬ ಆಹಾರದಿಂದ ಅಧರ್ಮಗಳೆಂಬ ಹಸಿವನ್ನು ತೀರಿಸಿದವನಾಗುವನು. ಆಗ ಪಕ್ಕದವರ ದೃಷ್ಟಿಯಲ್ಲಿ ಎದುರಿಗಿರುವವನ ಹಸಿವು ತೀರಿಸಿದವನಾಗುತ್ತಾನೆ. ಭಗವಂತನು ಕೃಷ್ಣನ ರೂಪದಲ್ಲಿ ಇದ್ದಾಗ ಹೇಳಿರುವ ಮಾತು ನೆರವೇರುವುದಕ್ಕೆ, ತನ್ನ ಮೂರನೆಯ ಅವತಾರದ ಸಮಯಕ್ಕೆ ಭೂಮಿಮೇಲೆ ಪೂರ್ತಿ ಅಜ್ಞಾನವನ್ನು ಬೆಳೆಯುವಂತೆ ಮಾಡಿದ್ದಾನೆ. ಇನ್ನು ಅದನ್ನು ಇಲ್ಲದಂತೆ ಮಾಡಿ ಧರ್ಮಗಳನ್ನು ನೆಲೆಗೊಳಿಸಿ ತನ್ನ ಮಾತನ್ನು ಉಳಿಸಿಕೊಳ್ಳುವನು. ಈ ವಿಧವಾಗಿ ದೇವರು ಭೂಮಿಮೇಲಕ್ಕೆ ಭಗವಂತನಾಗಿ ಬಂದು, ಮೂರು ಅವತಾರಗಳನ್ನು ಧರಿಸಿ ಪುನಃ ದೇವರಾಗಿ ಬದಲಾಗಿ ಹೋಗುತ್ತಿದ್ದಾನೆ. ದ್ವಾಪರಯುಗದಲ್ಲಿ ದೇವರು ಕೃಷ್ಣನಾಗಿ ಬಂದು, ಧರ್ಮಗಳನ್ನು

ಗೀತೆಯ ರೂಪದಲ್ಲಿ ಹೇಳಿಹೋಗಿ, ನಂತರ ಮೂರು ಸಾವಿರ ವರ್ಷಗಳಿಗೆ ಯೇಸುವಾಗಿ ಬಂದು ಆಗಲು ಕೂಡಾ ಧರ್ಮಗಳನ್ನು ತಿಳಿಸಿ, ಮೂರನೆಯ ಅವತಾರವಾಗಿ 'ಆಕರ್ತ' ರೂಪದಲ್ಲಿ ಬಂದು ತನ್ನ ಕಾರ್ಯವನ್ನು ಅಷ್ಟಕ್ಕೆ ಪೂರ್ಣಗೊಳಿಸುವನು. ಹಾಗೆ ಪೂರ್ಣಗೊಳಿಸಿದ ಭಗವಂತನು ಪುನಃ ದೇವರಾಗಿ ಬದಲಾಗಿ ಹೋಗುವನು. ಆದ್ದರಿಂದ ಮೊದಲು ಕೃಷ್ಣನು ದೇವರು, ನಂತರ ಕೃಷ್ಣನು ಭಗವಂತನು ಆ ನಂತರ ಕೃಷ್ಣನು ದೇವರಾಗುವನು. ಆದ್ದರಿಂದ ಕೃಷ್ಣನು ದೇವರು ಮತ್ತು ಭಗವಂತನೆಂದು ಹೇಳಬಹುದು.

ಇಲ್ಲಿಯವರೆಗು ಓದಿದ ಸಮಾಚಾರವನ್ನು ಅನುಸರಿಸಿ ಕೃಷ್ಣನು ನಂತರ ಯೇಸುವಾಗಿ ಬಂದಿದ್ದಾನೆಂದು ಅನೇಕ ಸಾಕ್ಷಿಗಳಿಂದ ತಿಳಿಯುತ್ತಿದೆ. ಈ ವಿಷಯಗಳೆಲ್ಲವೂ ಕ್ರೂಡೀಕರಿಸಿ ನೋಡಿದ ನಂತರ ಒಂದೇ ದೇವರು ಇಬ್ಬರಾಗಿ ಬಂದಿದ್ದಾನೆಂದು ತಿಳಿಯುತ್ತಿದೆ. ಆದರೇ ಈ ಜ್ಞಾನವನ್ನು ಲೋಕದಲ್ಲಿನ ಮನುಷ್ಯರು ಜೀರ್ಣಿಸಿಕೊಳ್ಳಲಾರರು. ಸುಲಭವಾಗಿ ಅರ್ಥವಾಗುವ ವಿಷಯ ವಿದ್ದರೂ ಮಧ್ಯದಲ್ಲಿ ಬಂದಿರುವ ಮತಗಳು ಮನುಷ್ಯರಲ್ಲಿ ಕಲಹಗಳನ್ನಿಟ್ಟು ಒಂದು ಮತದವರು ಮತ್ತೊಂದು ಮತದವರೊಂದಿಗೆ ದ್ವೇಷಿಸಿಕೊಳ್ಳುತ್ತಿದ್ದಾರೆ. ಅಷ್ಟಕ್ಕೆ ನಿಲ್ಲದೆ ಅವರ ಪ್ರವಕ್ತರೆಂದು ಹೇಳಲ್ಪಡುತ್ತಿರುವ ಇಬ್ಬರು ಭಗವಂತರನ್ನು ದೂಷಿಸುತ್ತಿದ್ದಾರೆ. ಹಿಂದೂಗಳು ಯೇಸುವನ್ನು ದೂಷಿಸಿದರೇ, ಕ್ರೈಸ್ತರು ಕೃಷ್ಣನನ್ನು ದೂಷಿಸುತ್ತಿದ್ದಾರೆ. ಇಬ್ಬರು ಸೇರಿ ಒಂದೇ ದೇವರನ್ನು ದೂಷಿಸುತ್ತಿದ್ದೇವೆಂಬ ವಿಷಯವು ಅವರಿಗೆ ತಿಳಿಯದೇ ಹೋಗಿದೆ. ಕೃಷ್ಣನು ಹೇಳಿರುವುದು ಭಗವದ್ಗೀತೆಯಾಗಿರುವಾಗ, ಯೇಸು ಹೇಳಿರುವುದು ಬೈಬಲ್‌ಆಗಿದೆ. ಈ ಎರಡರಲ್ಲು ಒಂದೇ ದೇವರ ಜ್ಞಾನ ವಿಷಯವಿದ್ದರೂ ಎರಡು ಗ್ರಂಥಗಳು ಬೇರೆಬೇರೆ ದೇವರನ್ನು ಕುರಿತು ಹೇಳಿರುವವೆಂದು ಅಜ್ಞಾನದಿಂದ ಮನುಷ್ಯರು ಅಂದುಕೊಳ್ಳುವುದು ನಡೆಯುತ್ತಿದೆ. ನಾವು ಸಂಪೂರ್ಣವಾಗಿ ಜ್ಞಾನವನ್ನು ತಿಳಿದು ಮತವೆಂಬ ಮಾಯೆಯಲ್ಲಿ ಸಿಲುಕಿಕೊಳ್ಳಲಿಲ್ಲ. ಮನುಷ್ಯರ ತಲೆಯಲ್ಲಿನ ಗುಣಗಳ ಪ್ರಭಾವದಿಂದ ಅಂದರೆ ಮಾಯೆ ಪ್ರಭಾವದಿಂದ 'ಮತ' ಎನ್ನುವುದು

ಮನುಷ್ಯರ ಮಧ್ಯೆಯಲ್ಲಿ ಬಂದು ಮನುಷ್ಯರನ್ನು ಅಜ್ಞಾಧಕಡೆ ಸೆಳೆದುಕೊಂಡು ಹೋಗುತ್ತಿದೆ. ಮತ ಒಂದರ ಮತ್ತಿನಲ್ಲಿ ಬಿದ್ದವನು ವಿಚಕ್ಷಣೆ ಕಳೆದುಕೊಂಡು ತಾನು ಏನು ಮಡುತ್ತಿದ್ದೇನೆಂಬ ಪ್ರಜ್ಞೆಯನ್ನು ಕಳೆದುಕೊಳ್ಳುತ್ತಿದ್ದಾನೆ. ಅಂತಹ ಪ್ರಜ್ಞೆಯಿಲ್ಲದ ಮನುಷ್ಯ ದೇವರಕಡೆ ಹೋಗುವಂತೆ ಭ್ರಮಿಸುತ್ತಾ ತಾನು ವಿನಾಶದಕಡೆ, ಅಜ್ಞಾನದಕಡೆ ಹೋಗುತ್ತಿದ್ದಾನೆ. ಮತವೆಂಬ ಮುಸುಗಿನಲ್ಲಿ ಎಷ್ಟೋ ಕ್ರೂರ ಕಾರ್ಯಗಳನ್ನು ಮಾಡುತ್ತಿದ್ದಾನೆ. ಎಷ್ಟೋ ಜನ ಮರಣಕ್ಕೆ ಕಾರಣವಾಗುತ್ತಿದ್ದಾನೆ. ಅದರಿಂದ ಭಯಂಕರವಾದ ಪಾಪವನ್ನು ಮೂಟೆಕಟ್ಟಿ ಕೊಂಡು ಅದನ್ನೇ ಅನೇಕ ಜನ್ಮಗಳ ವರೆಗು ಅನುಭವಿಸುತ್ತಿದ್ದಾನೆ.

ಈ ದಿನ ನಾವು ತ್ರಿಮತಗಳನ್ನು ಒಂದೇ ದಾರಿಗೆ ತಂದು ಎಲ್ಲರಿಗೂ ಒಂದೇ ದೇವರು, ಒಂದೇ ಜ್ಞಾನ' ಎಂದು ಹೇಳುತ್ತಿದ್ದರೂ ನಮ್ಮನ್ನು ಸಹ ಅನೇಕ ತೊಂದರೆಗಳಿಗೆ ಗುರಿಮಾಡುತ್ತಿದ್ದಾರೆ. ಸ್ವಲ್ಪವಾದರೂ ದೈವಜ್ಞಾನವನ್ನು ತಿಳಿಯದವರು ಮತಹಿರಿಯರಾಗಿ, ಮತ ಸಂಸ್ಕರ್ತರಾಗಿ, ಮತರಕ್ಷಕರಾಗಿ ಹೇಳಿಕೊಳ್ಳುತ್ತಾ ನಾವೇ ನಿಜವಾದ ಹಿಂದೂಗಳೆಂದು ಕೆಲವರು, ನಾವೇ ನಿಜವಾದ ಕ್ರೈಸ್ತರೆಂದು ಕೆಲವರು, ನಾವೇ ನಿಜವಾದ ಮುಸ್ಲಿಮ್‌ರೆಂದು ಕೆಲವರು ಹೇಳಿಕೊಳ್ಳುತ್ತಾ ದೇಶಭಕ್ತಿಯೆಂದು ಕೆಲವರು, ಸಮಾಜಭಕ್ತಿ ಎಂದು ಕೆಲವರು ಹೇಳಿಕೊಳ್ಳುತ್ತ ಅವರವರ ಮತಗಳನ್ನು ಬೆಳೆಸಿಕೊಳ್ಳುವುದಕ್ಕೆ ಪ್ರಯತ್ನಿಸುತ್ತಿದ್ದಾರೆ. ಈದಿನ ಭಕ್ತಿ ಎಂದಾಗಲೀ, ಜ್ಞಾನವೆಂದಾಗಲೀ ಅಥವಾ ದೈವಗ್ರಂಥದಲ್ಲಿನ ಜ್ಞಾನ ಪ್ರಚಾರವೆಂದಾಗಲೀ ಎಲ್ಲಾದರೂ ಇದ್ದರೇ ಅಲ್ಲಿ ದೇವರೂ, ದೇವರ ಜ್ಞಾನವು ಇರುವುದಿಲ್ಲ ಆದರೇ, ಅವರ ಹಿಂದೆ ಮತ ಅಭಿವೃದ್ಧಿಯೇ ಧ್ಯೇಯುವಾಗಿರುತ್ತದೆ. ಅವರವರ ಮತಗಳ ಅಭಿವೃದ್ಧಿಗೆ ಎಲ್ಲರೂ ಪ್ರಯತ್ನಿಸುತ್ತಿರುವಾಗ, ನಾವು ಮಾತ್ರ **ತ್ರಿಮತ ಏಕೈಕ ಗುರು** ಆಗಿ ಮೂರು ಮತಗಳಿಗೆ ಸಾಮರಸಯವನ್ನು ಬೋಧಿಸುತ್ತಿದ್ದರೂ, ಮೂರು ಮತಗಳಲ್ಲಿನ ಜ್ಞಾನವು ಒಂದೇ ಎಂದು ಮತ್ತು ದೇವರು ಒಬ್ಬನೇ ಎಂದು ಹೇಳುತ್ತಿದ್ದರೂ ಎಲ್ಲರೂ ಕೇಳಿಸಿಕೊಳ್ಳದೇ ಇದ್ದಾರೆ.

ಒಟ್ಟಾರೆ ಭೂಮಿಮೇಲೆ ಎಲ್ಲಾದರೂ ಮತಪ್ರಚಾರ ಹೊರತುಪಡಿಸಿ ದೈವಜ್ಞಾನ ಪ್ರಚಾರವೇ ಇಲ್ಲವೆಂದು ಹೇಳಬಹುದು. ಎಲ್ಲರಲ್ಲಿ ಮತ, ಮತಪ್ರಚಾರ, ಮತ ಅಭಿವೃದ್ಧಿ ಬಿಟ್ಟು ಜ್ಞಾನವೆಂಬ ಮಾತೇ ಇಲ್ಲದೇ ಹೋಗಿದೆ. ಮೇಲ್ನೋಟಕ್ಕೆ ಮಾತ್ರ ಎಲ್ಲರೂ ಜ್ಞಾನದ ಹೆಸರನ್ನೇ ಹೇಳುತ್ತಿದ್ದರೂ, ಕೊನೆಗೆ ಅವರಲ್ಲಿ ಮತ ಉದ್ದೇಶ ಬಿಟ್ಟು ಉಳಿದಿರುವುದು ಏನೂ ಇಲ್ಲವೆಂದು ತಿಳಿಯುತ್ತಿದೆ. ಮತಾತೀತ ಜ್ಞಾನವು ಎಲ್ಲೂ ಕಾಣಿಸುತ್ತಿಲ್ಲ. ದೇವರು ಆಕಾಶದ ಮೂಲಕ ಹೇಳಿರುವ ಜ್ಞಾನವನ್ನೇ ತೆರೆಮರೆಯಿಂದ ಹೇಳಿಸಿದರೂ, ತನ್ನ ಪ್ರತಿನಿಧಿಯಾದ ಭಗವಂತನ (ಆದರಣಕರ್ತ) ಮೂಲಕ ಹೇಳಿಸಿದರೂ, ಮನುಷ್ಯರು ಮಾತ್ರ ದೇವರು ಹೇಳಿರುವ ಜ್ಞಾನವನ್ನು ಕೇಳಿದಹಾಗೆಯೇ ನಟಿಸುತ್ತಾ, ಕೊನೆಗೆ ಮತದಕಡೆಗೇ ಆಸಕ್ತಿ ತೋರಿಸುತ್ತಿದ್ದಾರೆ. ದೇವರ ಜ್ಞಾನವನ್ನು ಕೂಡಾ ಮತ ಪ್ರಚಾರಕ್ಕೇ ವಿನಿಯೋಗಿಸುತ್ತಿದ್ದಾರೆ.

ಕೃತಯುಗದಲ್ಲಾಗಲೀ, ತ್ರೇತಾಯುಗದಲ್ಲಾಗಲೀ, ದ್ವಾಪರಯುಗ ದಲ್ಲಾಗಲೀ ಮತ್ತು ಕಲಿಯುಗದಲ್ಲಿ ಮೂರುಸಾವಿರ ವರ್ಷಗಳವರೆಗು ಮತಗಳ ಪ್ರಸ್ತಾವನೆಯೇ ಇಲ್ಲ, ಮನುಧರ್ಮ ಪ್ರಸ್ತಾವನೆಯೇ ಹೆಚ್ಚಾಗಿರುತ್ತಿತ್ತು. ಆಗ ಅಧರ್ಮಗಳೆಂದರೇ ನಾಲಕ್ಕೇ ಮುಖ್ಯವಾಗಿ ಇದ್ದವು. ಆ ನಾಲಕ್ಕು ಅಧರ್ಮ ಗಳನ್ನು ಅಡಗತಿಸುವುದಕ್ಕೆ ದೇವರು ಮುಖ್ಯವಾಗಿ ಮೂರು ಧರ್ಮಗಳನ್ನು ಪ್ರಚಾರವಾಗುವಂತೆ ಬೋಧಿಸಿದ್ದಾನೆ. ಮೂರು ಧರ್ಮಗಳನ್ನು ಮೂರು ಯೋಗಗಳಾಗಿ ಹೇಳಿರುವುದಾಗಿದೆ. ದೇವರ ಜನ್ಮವಾದ ಭಗವಂತನ ಬೋಧನೆಗಳೆಲ್ಲವೂ ಮನು ಧರ್ಮಗಳೆನಿಸಿಕೊಂಡ ನಾಲಕ್ಕು ಅಧರ್ಮಗಳನ್ನು, ಅವುಗಳಿಗೆ ಅನುಬಂಧವಾದ ಆಚರಣೆಗಳನ್ನು ಅಡಗಿಸಿ ಹಾಕುವುದಕ್ಕೇ ಮೂರು ಯೋಗಗಳ ಧರ್ಮಗಳನ್ನು ತಿಳಿಸುವವಾಗಿವೆ. ದೇವರು ಒಂದು ಯೋಜನೆಯ ಪ್ರಕಾರ ಹೇಳಿರುವ ಜ್ಞಾನದಲ್ಲಿ ಮನು ಧರ್ಮಗಳೆಂದು ಪ್ರಚಾರವಾದ ಅಧರ್ಮಗಳನ್ನು ಇಲ್ಲದಂತೆ ಮಾಡುವ ಉದ್ದೇಶ ಬಿಟ್ಟು ಮತ್ತಿನ್ನೇನು ಇಲ್ಲ. ಅಧರ್ಮಗಳನ್ನು ಇಲ್ಲದಂತೆ ಮಾಡುವುದಕ್ಕೆ ಧರ್ಮಗಳನ್ನು ಬೋಧಿಸಬೇಕಾಗಿ

ಬಂದಿದೆ. ದೇವರು ತನ್ನ ಬೋಧನೆಯಲ್ಲಿ **ಅಧರ್ಮ ಖಂಡನೆ, ಧರ್ಮ ಉದ್ಧಾರಣೆಯನ್ನು** ಮುಖ್ಯವಾಗಿ ಇಟ್ಟು ಹೇಳಿರುವುದಾಗಿದೆ. ದೇವರು ಮೂರು ವಿಧಗಳಾಗಿ ಭೂಮಿಮೇಲೆ ತನ್ನ ಜ್ಞಾನವನ್ನು ಹೇಳಿದರೂ ನಾಲಕ್ಕು ಅಧರ್ಮಗಳನ್ನು ಇಲ್ಲದಂತೆ ಮಾಡುವುದಕ್ಕೇ ಹೇಳಿದ್ದಾನೆ ಹೊರತು ಆ ದಿನ ಇಲ್ಲದ ಮತಗಳನ್ನು ಖಂಡಿಸಿ ಹೇಳಲಿಲ್ಲ.

ನಾಲಕ್ಕು ಯುಗಗಳಲ್ಲಿ ಮೂರು ಯುಗಗಳಿಂದ ಮನು ಧರ್ಮಗಳೇ ದೇವರ ಜ್ಞಾನಕ್ಕು, ದೇವರ ಧರ್ಮಗಳಿಗು ಆತಂಕವಾಗಿ ಇರುವಾಗ, ಈದಿನ ಕಲಿಯುಗದಲ್ಲಿ ನಾಲಕ್ಕು ಅಧರ್ಮಗಳಿಗಿಂತಲೂ ದೊಡ್ಡ ಆತಂಕವಾಗಿರುವುದು 'ಮತ' ಎನ್ನುವುದು. ಮೂರು ಯುಗಗಳಲ್ಲಿ ಮನು ಧರ್ಮಗಳು ದೇವರ ಜ್ಞಾನದ ಬಗ್ಗೆ ಅಧರ್ಮಗಳಾಗಿ ಇದ್ದರೂ, ಅವು ಮನುಷ್ಯರೆಲ್ಲರಲ್ಲೂ ಇಲ್ಲದೇ ಕೆಲವರಲ್ಲಿ ಮಾತ್ರವೇ ಇರುತ್ತಿದ್ದವು. ಉಳಿದ ಮನುಷ್ಯರಿಗೆ ಅಧರ್ಮಗಳ ವಿಷಯವಾಗಲೀ, ಧರ್ಮಗಳ ವಿಷಯವಾಗಲೀ ತಿಳಿಯದೇ ಇರುತ್ತಿತ್ತು. ಮನು ಧರ್ಮಗಳು ನಾಲಕ್ಕು ಅಧರ್ಮಗಳಾಗಿದ್ದರೂ ಅವು ಪೂರ್ವದಿಂದಲು ಇದ್ದ ಇಂದೂ (ಹಿಂದೂ) ಸಮಾಜದಲ್ಲಿ ಒಂದು ಅಥವಾ ಎರಡು ಕುಲಗಳಲ್ಲಿ ಮಾತ್ರ ಇರುತ್ತಿದ್ದವು. ಮುಖ್ಯವಾಗಿ ಅಗ್ರಕುಲದಲ್ಲಿ ಮಾತ್ರ ನಾಲಕ್ಕು ಅಧರ್ಮಗಳಾದ ಯಜ್ಞ, ದಾನ, ವೇದ, ತಪಸ್ಸುಗಳು ಎನ್ನುವವು ಇರುತ್ತಿದ್ದವು. ಇಂದೂ ಸಮಾಜ ಹೊರತು ಆದಿನ ಯಾವ ಮತ ಸಮಾಜವು ಇಲ್ಲ. ಆದಿನ ಮೂರು ಯುಗಗಳಿಂದ ಕುಲ ವ್ಯವಸ್ಥೆಗಳು, ಅವುಗಳ ಅಜ್ಞಾನವಿತ್ತು. ಆದರೂ ದೇವರ ಜ್ಞಾನಕ್ಕೆ ಆತಂಕವಾಗಿ ಯಾವ ಕುಲ ವ್ಯವಸ್ಥೆ ಇಲ್ಲದಂತಿತ್ತು. ಒಂದೇ ಕುಲದವರು ಮಾತ್ರ ನಾಲಕ್ಕು ಅಧರ್ಮಗಳನ್ನು ಆಚರಿಸುತ್ತಾ, ಎಲ್ಲರಿಂದ ಆಚರಣೆ ಮಾಡಿಸುತ್ತಾ ಅವುಗಳಿಂದಲೇ ತಮ್ಮ ಜೀವನವನ್ನು ಸಾಗಿಸುತ್ತಿದ್ದರು. ಒಂದು ಅಗ್ರಕುಲದವರೇ ರಾಜರಿಗೆ ಸಹಿತ ಗುರುಗಳಾಗಿದ್ದು, ರಾಜುಗಳ ಕೈಯಿಂದ ಮತ್ತು ಉಳಿದ ಮನುಷ್ಯರ ಕೈಯಿಂದ ಯಜ್ಞ, ದಾನ, ವೇದಾಧ್ಯಯನ, ತಪಸ್ಸುಗಳನ್ನು ಆಚರಣೆ ಮಾಡಿಸುತ್ತಿದ್ದರು. ಈ ನಾಲಕ್ಕು ಈದಿನವಾಗಲೀ, ಆದಿನವಾಗಲೀ ಎಲ್ಲರಿಗೂ

ಮುಖ್ಯ ಕಾರ್ಯಗಳಾಗಿ ಕಾಣಿಸುತ್ತಿವೆ. ಈದಿನ ನಾವು ಈ ನಾಲಕ್ಕು ಆಚರಣೆಗಳನ್ನು ಅಧರ್ಮಗಳೆಂದರೂ ಸಹಿಸದ ಬಾಧೆ ಕೆಲವರಲ್ಲಿ ಉಂಟಾಗಬಹುದು. ಅಧರ್ಮಗಳ ಹೆಸರನ್ನು ನಾವು ಹೇಳಿದರೂ ಅವು ಅವರಲ್ಲಿ ಧರ್ಮಗಳಾಗಿ ತುಂಬಿಕೊಂಡಿರುವುದರಿಂದ ನಮ್ಮ ಮಾತು ರುಚಿಸದೆ ಅವರಲ್ಲಿ ದ್ವೇಷವನ್ನು ಬೆಳೆಸುತ್ತಿವೆ.

ಇಂದೂ ಸಮಾಜವು ಈದಿನ ಹಿಂದೂ ಮತವಾಗಿ ಬದಲಾಗಿ ಹೋಗಿ ಇತರ ಮತಗಳ ಮುಂದೆ ಬಲಹೀನವಾಗಿ ಹೋಗುವುದು, ಇತರ ಮತಗಳು ಅಭಿವೃದ್ಧಿ ಹೊಂದುವುದು ಎಲ್ಲರಿಗೂ ತಿಳಿದಿರುವ ವಿಷಯವೇ. ಈದಿನ ಹಿಂದೂಗಳಲ್ಲಿ ಮತರಕ್ಷಣೆ ಮುಖ್ಯವಾಗಿರುವಾಗ ಅದಕ್ಕಾಗಿ ಕೆಲವು ಮತ ಸಂಘಗಳು ಏರ್ಪಟ್ಟಿವೆ. ಉಳಿದ ಮತಗಳಲ್ಲಿ ಮತ ಅಭಿವೃದ್ಧಿ ಮುಖ್ಯ ಧ್ಯೇಯವಾಗಿ ಅದೇ ಕಾರ್ಯವನ್ನು ಮಾಡುತ್ತಿವೆ. ಹೀಗೆ ಮತರಕ್ಷಣೆಯಲ್ಲಿ ಕೆಲವರು, ಮತ ಅಭಿವೃದ್ಧಿಯಲ್ಲಿ ಕೆಲವರು ಕಾಲ ಕಳೆಯುತ್ತಿದ್ದಾರೆ ಹೊರತು ಪೂರ್ವದಿಂದ ದೇವರು ಏನು ಬೋಧಿಸಿದ್ದಾನೆಂದಾಗಲೀ, ಈದಿನ ನಮ್ಮ ಮತಗ್ರಂಥಗಳಾಗಿ ಹೇಳಲ್ಪಡುತ್ತಿರುವ ಮೂರು ದೈವಗ್ರಂಥಗಳಲ್ಲಿ ಏನಿದೆಯೆಂದು ಕಣ್ಣುತೆರೆದು ನೋಡದೇ ಇದ್ದಾರೆ. ದೇವರು ಮನುಷ್ಯನಾಗಿ ಬಂದು ಹೇಳಿರುವ ಬೋಧನೆಗಳು ಅಜ್ಞಾನ ಕುರುಡತನದಲ್ಲಿ ಸ್ವಲ್ಪವಾದರೂ ತಿಳಿಯದೆ ಹೋಗಿವೆ. ಕೆಲವರಾದರೇ 'ದೇವರು ಹುಟ್ಟುವುದಿಲ್ಲ' ಎಂದು ಸಹ ವಾದಿಸುತ್ತಿದ್ದಾರೆ. ಒಟ್ಟಿನಲ್ಲಿ ದೇವರ ಜ್ಞಾನವು ಭೂಮಿಮೇಲೆ ಕೊರೆತೆಯಾಗಿ ಹೋಗಿದೆ.

ಪೂರ್ವವು ಅಧರ್ಮಗಳೆಂದು ಹೇಳಲ್ಪಡುವವು ಒಂದು ಹಿಂದೂಮತಕ್ಕೆ ಮಾತ್ರ ಪರಿಮಿತಿಯಾಗಿ ಹೋಗಿದ್ದರೇ, ಉಳಿದ ಮತಗಳಿಗೆ ಅಧರ್ಮಗಳಿಲ್ಲ ಅಲ್ಲವೇ! ಎಂದು ಕೆಲವರು ಕೇಳಬಹುದು. ಅದಕ್ಕೆ ಉತ್ತರವನ್ನು ಹೇಳಿದರೇ ಹೀಗಿದೆ. ಯಜ್ಞ, ದಾನ, ವೇದ, ತಪಸ್ಸುಗಳು ಒಂದು ಹಿಂದೂಮತಕ್ಕೇ ಪರಿಮಿತಿಯಾಗಿ ಹೋದರೂ, ಉಳಿದ ಮತಗಳಲ್ಲಿ ಈ ನಾಲಕ್ಕು ಮಾತುಗಳೇ ಕೇಳಿಸದೆ ಇದ್ದರೂ ಅವರಲ್ಲಿ ಎಲ್ಲದಕ್ಕಿಂತಲೂ ದೊಡ್ಡ ಅಧರ್ಮವಾದ 'ಮತ'

ಬಂದು ಸೇರಿದೆ. ಪೂರ್ವದಿಂದ ಇರುವ ನಾಲಕ್ಕು ಅಧರ್ಮಗಳ ಮೇಲೆ ರಾವಣಬ್ರಹ್ಮ ಮೊದಲಾದವರು ಹೋರಾಡಿ ಅವುಗಳನ್ನು ಇಲ್ಲದೇ ಮಾಡಬೇಕೆಂದುಕೊಂಡು ಲೋಕದಲ್ಲಿ ಹೀರೋ ಆದ ರಾವಣಬ್ರಹ್ಮ ವಿಲನ್‌ಆಗಿ ಬದಲಾಗಿಹೋದನು. ಹಿಂದೂಮತದಲ್ಲಿನವರಿಗೆ ಯಾವುದು ಧರ್ಮ, ಯಾವುದು ಅಧರ್ಮ ಎಂದು ತಿಳಿಯದೇ ಹೋಗಿದೆ. ಧರ್ಮಗಳನ್ನು ಅಧರ್ಮಗಳಾಗಿ, ಅಧರ್ಮಗಳನ್ನು ಧರ್ಮಗಳಾಗಿ ಭಾವಿಸಿಕೊಂಡಿದ್ದಾರೆ. ಇದೆಲ್ಲಾ ಇಂದಿನ ಹಿಂದೂಗಳ ಅವಸ್ಥೆಗಳಾದರೇ, ಇತರ ಮತಗಳೊಳಗೆ 'ತಪಸ್ಸು' ಎಂಬ ಅಧರ್ಮ ರೂಪ ಬದಲಾಯಿಸಿಕೊಂಡು, ಹೆಸರು ಬದಲಾಯಿಸಿಕೊಂಡು ಸೇರಿಹೋಗಿದೆ. ಅವರಿಂದ ಅವರಿಗೆ ತಿಳಿಯದಂತೆ ಬಳಲುವಂತೆ ಮಾಡುತ್ತಿದೆ. ಆ ವಿಷಯವನ್ನು ಇತರ ಮತಗಳವರು ಗ್ರಹಿಸಲಾರದೆ ಇದ್ದಾರೆ. ಹಿಂದೂಗಳಿಗಿರುವ ನಾಲಕ್ಕು ಅಧರ್ಮಗಳಲ್ಲಿ ದಾನ, ತಪಸ್ಸು ಎಲ್ಲ ಮತಗಳಲ್ಲಿ ಸೇರಿಹೋಗಿ ಅವರನ್ನು ಕೂಡಾ ಅಧರ್ಮ ಮಾರ್ಗದಲ್ಲಿ ಪ್ರಯಾಣಿಸುವಂತೆ ಮಾಡುತ್ತಿವೆ. ಇದು ಹೀಗಿರುವಾಗ ಈದಿನ ಎಲ್ಲದಕ್ಕಿಂತಲೂ ದೊಡ್ಡದಾಗಿರುವ ಅಧರ್ಮ ಮತವೆನ್ನುವುದು. ಮತವೆನ್ನುವುದು ಮೂರು ಯುಗಗಳಲ್ಲಿ ಇಲ್ಲದಿದ್ದರೂ ಈದಿನ ಕಲಿಯುಗದಲ್ಲಿ ಬಂದು ಸೇರಿದೆ.

ದ್ವಾಪರಯುಗದ ಕೊನೆಯಲ್ಲಿ, ಕಲಿಯುಗ ಮೊದಲಿನಲ್ಲಿ ದೇವರು ಭಗವಂತನಾಗಿ ಬಂದು ಕೃಷ್ಣನ ರೂಪದಲ್ಲಿ ಮೂರು ಯುಗಗಳಿಂದ ಇರುವ ನಾಲಕ್ಕು ಅಧರ್ಮಗಳಿಗೆ ಸ್ವಸ್ತಿ ಹೇಳುವುದಕ್ಕೆ ಎಷ್ಟೋ ನೈಪುಣ್ಯವಾಗಿ ಭಗವದ್ಗೀತೆಯನ್ನು ಬೋಧಿಸಿದ್ದಾನೆ. ಕೃಷ್ಣನು ಹೇಳಿರುವ ಭಗವದ್ಗೀತೆಯಲ್ಲಿ ವಿಶ್ವರೂಪ ಸಂದರ್ಶನ ಯೋಗದಲ್ಲಿ 48ನೇ ಶ್ಲೋಕದಲ್ಲಿಯೂ, 53ನೇ ಶ್ಲೋಕದಲ್ಲಿಯೂ ತ್ರೈತಾಯುಗದಲ್ಲಿ ರಾವಣ ಬ್ರಹ್ಮ ಎದುರಿಸಿದ್ದ ನಾಲ್ಕು ಅಧರ್ಮಗಳನ್ನು ಅಡಗಿಸುವುದಕ್ಕೆ ಈ ಎರಡು ಶ್ಲೋಕಗಳಲ್ಲಿ ನಾಲ್ಕು ಅಧರ್ಮಗಳಿಗೆ ಬಲೆ ಬೀಸಿದ್ದಾನೆ. ಆ ಎರಡು ಶ್ಲೋಕಗಳನ್ನು ಇಲ್ಲಿ ನೋಡೋಣ.

***ಶ್ಲೋ॥48ನೇ. ನವೇದ ಯಜ್ಞಾಧ್ಯಯ ನೈರ್ನ ದಾನೈರ್ನ ಚಕ್ರಿಯಾಭಿರ್ನ ತಪೋಭಿರುಗ್ರೈಃ।***
***ಏವಂ ರೂಪಶ್ಯಕ್ಯೆ ಅಹಂ ನೃಲೋಕೇ ದ್ರಷ್ಟುಂ ತ್ವದನ್ಯೇನ ಕುರುಪ್ರವೀರ॥***

**ಭಾವಾರ್ಥ:-"ಭೂಮಿಮೇಲೆ ನೀನು ಹೊರತು ಈ ವಿಶ್ವರೂಪವನ್ನು ನೋಡಿದವರು ಇಲ್ಲ. ಯಜ್ಞಗಳಿಂದಾಗಲೀ, ವೇದಾಧ್ಯಯನದಿಂದಾಗಲೀ, ದಾನಗಳಿಂದಾಗಲೀ, ಉಗ್ರತಪಸ್ಸುಗಳಿಂದಾಗಲೀ ನನ್ನ ದರ್ಶನ ದೊರೆಯುವುದಕ್ಕೆ ಸಾಧ್ಯವಿಲ್ಲ."**

***53ನೆ ಶ್ಲೋ॥ ನಾಹಂ ವೇದೈರ್ನ ತಪಸಾ ನದಾನೇನ ನ ಚೇಜ್ಯಯಾ ।***
***ಶಕ್ಯಂ ಏವಂ ವಿದೋ ದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ ॥***

**ಭಾವಾರ್ಥ :- "ತಪಸ್ಸಿನಿಂದಾಗಲೀ, ದಾನಗಳಿಂದಾಗಲೀ, ಯಜ್ಞಾಗಳಿಂದಾಗಲೀ, ವೇದಗಳಿಂದಾಗಲೀ ಈಗ ನೀನು ನೋಡಿರುವ ಈ ವಿಶ್ವರೂಪ ದೊರೆಯುವುದು ಸಾಧ್ಯವಿಲ್ಲ."**

ಈ ವಿಧವಾಗಿ ಭಗವದ್ಗೀತೆ ಎರಡು ಶ್ಲೋಕಗಳಲ್ಲಿ ಅಧರ್ಮ ಖಂಡನೆ ಮಾಡುವುದೇ ಅಲ್ಲದೇ ಇವುಗಳಿಂದ ದೇವರನ್ನು ತಿಳಿಯುವುದಕ್ಕೆ ಸಾಧ್ಯವಿಲ್ಲವೆಂದು ಖಂಡಿಸಿ ಹೇಳುವುದು ನಡೆದಿದೆ. ದೇವರು ತನ್ನ ಭಗವದ್ಗೀತೆ ಯಿಂದ ಈ ಕಾರ್ಯಗಳು ಕೆಲಸಕ್ಕೆ ಬರುವುದಿಲ್ಲ, ಇವುಗಳಿಂದ ನಾನು ತಿಳಿಯಲ್ಪಡುವುದಿಲ್ಲವೆಂದು ಹೇಳಿದರೂ ಮನುಷ್ಯರು ಮಾತ್ರ ಅಜ್ಞಾನವಾಗಿಯೇ ಅಧರ್ಮಗಳನ್ನೇ ಆಚರಿಸುತ್ತಿದ್ದಾರೆ. ಯಜ್ಞಗಳು ಮಾಡುವುದು, ವೇದಾಧ್ಯಯನ ಮಾಡುವುದು, ಧ್ಯಾನ (ತಪಸ್ಸು) ಮಾಡುವುದನ್ನು ಎಲ್ಲರೂ ಮಾಡುತ್ತಿದ್ದಾರೆ. ಹಿಂದೂ ಮತದಲ್ಲಿ ಈ ನಾಲಕ್ಕು ಕಾರ್ಯಗಳಿಗಿಂತ ಮೀರಿದ ಜ್ಞಾನವು ಇಲ್ಲವೆನ್ನುವಂತೆ ಮನುಷ್ಯರು ಪ್ರವರ್ತಿಸುತ್ತಾ ದೇವರು ಬೇಡವೆಂದು ಹೇಳಿರುವು ದನ್ನೇ ಮಾಡುತ್ತಿದ್ದಾರೆ. ತ್ರೈತಾಯುಗದಲ್ಲಿಯೇ ರಾವಣಬ್ರಹ್ಮ ಈ ನಾಲಕ್ಕು ಕಾರ್ಯಗಳನ್ನು ಪೂರ್ತಿ ವಿರೋಧಿಸಿ, ಆದಿನವೇ ಇವುಗಳನ್ನು ಅಧರ್ಮಗಳಾಗಿ ಪ್ರಕಟಿಸಿದ್ದಾನೆ. ಆದರೇ ರಾವಣಬ್ರಹ್ಮನನ್ನು ಎಲ್ಲರೂ ಯಜ್ಞಗಳನ್ನು ಭಂಗಮಾಡಿದವನು ದುಷ್ಟನೆಂದು ಹೇಳಿದ್ದಾರೆ. ಮನುಷ್ಯರಿಗೆ ಒಳ್ಳೆಯದು

ಯಾವುದೋ ಕೆಟ್ಟದು ಯಾವುದೋ ತಿಳಿಯದೆ ಹೋಗಿರುವುದರಿಂದ ಅಧರ್ಮಗಳಿಗೆ ಪೂರ್ತಿಯಾಗಿ ಅಭ್ಯಾಸವಾಗಿ ಹೋಗಿರುವುದರಿಂದ ರಾವಣಬ್ರಹ್ಮನನ್ನು ಆದಿನ ದುಷ್ಟನೆಂದು ದೂಷಿಸಿದ್ದಾರೆ. ಅದೇ ವಿಷಯವನ್ನೇ ಕೃಷ್ಣ ಭಗವಾನನು ತನ್ನ ಭಗವದ್ಗೀತೆಯಲ್ಲಿ ಹೇಳಿದರೇ ಅದನ್ನು ತಿಳಿಯದಂತೆ ನಿಶ್ಶಬ್ಧವಾಗಿ ಇದ್ದಾರೆ.

ಆ ದಿನ ಮೂರು ಯುಗಗಳಿಂದ ನಾಲಕ್ಕು ಅಧರ್ಮಗಳೇ ರಾಜ್ಯವಾಳುತ್ತಿರುವುದರಿಂದ ಮನುಷ್ಯರಿಗೆ ಧರ್ಮಗಳು ಯಾವುವೋ ತಿಳಿಯದೆ ಹೋಗಿವೆ. ನಾಲಕ್ಕು ಅಧರ್ಮಗಳನ್ನೇ ಮನುಷ್ಯರೆಲ್ಲರೂ ಧರ್ಮಗಳೆಂದುಕೊಂಡು ಆಚರಿಸುವುದು ನಡೆದಿದೆ. ಕೊನೆಗೆ ದ್ವಾಪರಯುಗದಲ್ಲಿ ಧರ್ಮಗಳಿಗೆ ಪೂರ್ತಿಯಾಗಿ ಮುಪ್ಪು ಏರ್ಪಟ್ಟು, ಅಧರ್ಮಗಳು ಹೆಚ್ಚಿನ ಮಟ್ಟಕ್ಕೆ ವಿಜೃಂಭಿಸಿ ಹೋಗಿರುವುದರಿಂದ, ದೇವರು ಅಧರ್ಮಗಳನ್ನು ಅಡಗಿಸಿ ಧರ್ಮಗಳನ್ನು ಪುನರುದ್ಧರಿಸುವುದಕ್ಕೆ ಭೂಮಿಮೇಲೆ ಮನುಷ್ಯನಹಾಗೆ ಬರಬೇಕಾಗಿ ಬಂದಿದೆ. ಭೂಮಿಮೇಲೆ ಮನುಷ್ಯನಾಗಿ ಹುಟ್ಟಿರುವ ದೇವರು ಅಧರ್ಮಗಳನ್ನು ಕಡೆಗಾಣಿಸಿ ಇವುಯೆಂದು ಭಗವದ್ಗೀತೆಯಲ್ಲಿ ಹೇಳಿರುವುದಾಗಿದೆ. ಆದರೇ ಆದಿನ ಮತಗಳು ಇಲ್ಲದಿರುವುದರಿಂದ ಅಗ ಅವುಗಳೇ ಅಧರ್ಮಗಳಾಗಿ ಮನುಷ್ಯರನ್ನು ದೇವರಕಡೆ ಹೋಗದಂತೆ ಮಾಡಿವೆ. ಈದಿನ ಪೂರ್ವದಿಂದಲೂ ಇರುವ ಅಧರ್ಮಗಳನ್ನು ಮೀರಿದ 'ಮತ' ಎನ್ನುವುದು ಬಂದು ಎಲ್ಲ ಮತಗಳ ಮನುಷ್ಯರನ್ನು ದೇವರ ಮಾರ್ಗದಿಂದ ತಪ್ಪಿಸಿ ಅಜ್ಞಾನ ಮಾರ್ಗದಲ್ಲಿ ಕಳುಹಿಸುತ್ತಿದೆ. ನಾಲಕ್ಕು ಅಧರ್ಮಗಳ ಪ್ರಭಾವಒಂದು ಹಿಂದೂಮತದಲ್ಲಿಯೇ ಕಾಣಿಸಿದರೇ, 'ಮತ' ಎಂಬ ದೊಡ್ಡ ಅಧರ್ಮವು ಎಲ್ಲ ಮತಗಳಲ್ಲಿ ಕಾಣಿಸುತ್ತಿದೆ.

ದೇವರು ಹೇಳಿರುವ ದೈವಜ್ಞಾನವು ಮೂರು ಗ್ರಂಥಗಳಾಗಿ ರೂಪತಿದ್ದಿ ಕೊಂಡರೇ, ಆ ಮೂರು ದೈವಗ್ರಂಥಗಳಿಗು ಸಹ 'ಮತ' ಎಂಬ ಬಣ್ಣಹಚ್ಚಿ, ಇದು ಹಿಂದೂಗಳವರದು, ಅದು ಮುಸ್ಲೀಮ್‌ರದು, ಇನ್ನೊಂದು ಕ್ರೈಸ್ತರದು ಎಂದು ಹೇಳುತ್ತಿದ್ದಾರೆ. ಕೊನೆಗೆ ದೈವಗ್ರಂಥಗಳು ಕೂಡಾ ಮತಗ್ರಂಥಗಳಾಗಿ

ಬದಲಾಗಿಹೋಗಿ ಹಾಗೆಯೇ ಪ್ರಜೆಗಳಲ್ಲಿ ಪ್ರಚಾರವಾಗಿವೆ. ಇನ್ನು ಮೂರು ಗ್ರಂಥಗಳು ವಿನಹ ಬೇರೊಂದು ದೈವಗ್ರಂಥವು ಬರುವುದಕ್ಕೆ ಅವಕಾಶವಿಲ್ಲ. ದೇವರು ಹೇಳಿರುವ ಮೂರು ವಿಧಾನಗಳ ಪ್ರಕಾರ ಮುಂದೆ ಹಿಂದೆ ಮೂರು ಗ್ರಂಥಗಳು ಬಂದಿವೆ. ಅವು ಬಂದಿರುವ ವರಸೆ ಕ್ರಮದಲ್ಲಿಯೇ ಅವುಗಳಿಗೆ ಪ್ರಥಮ, ಮಧ್ಯಮ, ಅಂತಿಮ ದೈವಗ್ರಂಥಗಳೆಂದು ಕರೆಯಲಾಗಿದೆ. ಮೂರು ದೈವಗ್ರಂಥಗಳು ಮುಂದೆ ಹಿಂದೆ ಬಂದರೂ ಅವುಗಳಿಗೆ ಮತವೆಂಬ ಬಣ್ಣಹಚ್ಚಿ, ಅವುಗಳನ್ನು ದೈವಗ್ರಂಥಗಳ ಸ್ಥಾನದಿಂದ ಮತಗ್ರಂಥಗಳ ಸ್ಥಾನಕ್ಕೆ ಮನುಷ್ಯರೇ ಇಳಿಸಿದ್ದಾರೆ. ಕಲಿಯುಗದಲ್ಲಿ ಹುಟ್ಟಿರುವ **'ಮತ'** ಎಂಬ ಅಧರ್ಮವು ಪೂರ್ವದಿಂದ ಇರುವ ನಾಲಕ್ಕು ಅಧರ್ಮಗಳಿಗಿಂತಲೂ ದೊಡ್ಡದು.

ಪೂರ್ವದಿಂದಲು ಇರುವ ಅಧರ್ಮಗಳು ಒಂದು ಹಿಂದೂಮತದ ಮೇಲೆ ಪ್ರತ್ಯಕ್ಷವಾಗಿ ಪ್ರಭಾವ ತೋರಿವೆ. ಕಲಿಯುಗದಲ್ಲಿ ಹೊಸದಾಗಿ ಬಂದಿರುವ ಮತಗಳ ಮೇಲೆ **'ದಾನ', 'ಧ್ಯಾನ'** ಎಂಬ ಎರಡು ಪರೋಕ್ಷವಾಗಿ ಪ್ರಭಾವವನ್ನು ತೋರಿವೆ. ಯಜ್ಞಗಳು, ವೇದಗಳು ಇಂದಿಗೂ ಹಿಂದೂ ಮತವನ್ನು ಬಿಡದೆ ಪೀಡಿಸುತ್ತಾ ಮನುಷ್ಯರನ್ನು ತಪ್ಪುದಾರಿ ಹಿಡಿಸುತ್ತಿರುವಾಗ ಕೃಷ್ಣನು ತನ್ನ ಜ್ಞಾನದಲ್ಲಿ ಅವುಗಳನ್ನು ಖಂಡಿಸಿದ್ದಾನೆ. ನಂತರ ಬಂದಿರುವ ಭಗವಂತನು (ಆದರಣಕರ್ತ) ಯೇಸು ಅಂದಿನ ಶಾಸ್ತ್ರಿಗಳಿಗೆ ವಿರುದ್ಧವಾದ ಬೋಧನೆಗಳನ್ನು ಹೇಳಿದಾಗ ಅವರು ಯೇಸು ಮರಣಕ್ಕೇ ಕಾರಣವಾದರು. ಚರಿತ್ರೆ ಎಲ್ಲವನ್ನು ಗಮನಿಸಿದಾಗ ಕೃಷ್ಣನು ಮತ್ತು ಯೇಸು ಇಬ್ಬರೂ ಭಗವಂತರೇ ಎಂದು ತಿಳಿಯುತ್ತಿದೆ. ಯೇಸು ಭಗವಂತನೆಂದು ಯೇಸು ನಂತರ ಬರುವ ಭಗವಂತನು ಬೋಧಿಸುತ್ತಾನೆ. ಕೃಷ್ಣನು ಭಗವಂತನೆಂದು ಕೃಷ್ಣನ ನಂತರ ಬಂದ ಯೇಸು ಹೇಳಬೇಕಾಗಿದೆ. ಆದರೇ ಯೇಸು ಕೃಷ್ಣನನ್ನು ಕುರಿತು ಎಲ್ಲೂ ಹೇಳಿದಂತೆ ಕಾಣಿಸಲಿಲ್ಲ. ಆದರೂ ಯೇಸು ಕೃಷ್ಣನನ್ನು ಹೋಲಿರುವ ಜೀವನವನ್ನು ಸ್ವಲ್ಪ ಕಳೆಯುವುದರಿಂದ ಯೇಸು ನಾನು ಕೃಷ್ಣನು ಒಬ್ಬನೇ ಎಂದು ಹೇಳಿದಂತಾಗಿದೆ. ಯೇಸು ಹುಟ್ಟಿದಾಗ, ಕೃಷ್ಣನು ಹುಟ್ಟಿದಾಗ ಒಂದೇ ವಿಧವಾದ ಅನುಭವಗಳು ಇಬ್ಬರ ಜೀವನದಲ್ಲಿ

ಬಂದಿವೆ. ಕೃಷ್ಣನು ಅಶುಭ್ರವಾದ ಸೆರೆಮನೆಯಲ್ಲಿ ಪಕ್ಕದಲ್ಲಿ ತಂದೆ ಹೊರತು ಯಾರೂ ಇಲ್ಲದಾಗ ಹುಟ್ಟಿದರೇ, ಅದೇ ವಿಧವಾಗಿ ಯೇಸು ಪಶುಗಳ ಕೊಟ್ಟಿಗೆಯಲ್ಲಿ ಪಕ್ಕದಲ್ಲಿ ತಂದೆ ಹೊರತು ಯಾರೂ ಇಲ್ಲದ ಸಮಯದಲ್ಲಿ ಹುಟ್ಟಿದ್ದಾನೆ. ಹುಟ್ಟಿದ ಕೂಡಲೇ ಇಬ್ಬರಿಗೂ ಪ್ರಾಣಾಪಾಯ ಇದ್ದುದ್ದರಿಂದ ಹುಟ್ಟಿದ ಸ್ಥಳವನ್ನು ಇಬ್ಬರೂ ಬಿಟ್ಟುಹೋದರು. ಇಬ್ಬರನ್ನೂ ಕೊಲ್ಲುವುದಕ್ಕೆ ಆಯಾ ದೇಶಗಳ ರಾಜರು ಪ್ರಯತ್ನಿಸಿ ಕೊನೆಗೆ ಎರಡು ವರ್ಷಗಳ ಚಿಕ್ಕವಯಸ್ಸಿನ ಮಕ್ಕಳನ್ನು ಕೊಲ್ಲುವುದು ಎರಡುಕಡೆಗಳಲ್ಲಿ ನಡೆದಿದೆ. ಕೃಷ್ಣನ ಜನನದಲ್ಲಿ ನಡೆದ ಸಂಘಟನೆಗಳು ಎಲ್ಲಾ ಯೇಸು ಜೀವನದಲ್ಲಿ ನಡೆದಿರುವುದರಿಂದ ಕೃಷ್ಣನು ಕೂಡಾ ಆದರಣಕರ್ತನೇ ಎಂಬ ಸೂಚನೆಯನ್ನು ಯೇಸು ಜೀವನವು ತೋರಿಸಿದಂತಾಗಿದೆ. ಯೇಸು ಜನ್ಮವೇ ಅಲ್ಲದೇ ಮರಣವು ಕೂಡಾ ಕೃಷ್ಣನಹಾಗೆಯೆ ನಡೆದಿದೆ. ಯೇಸು ಪಾದಗಳಲ್ಲಿ ಮೊಳೆಗಳು ಹೊಡೆದಿದ್ದರೇ ರಕ್ತವು ಸೋರಿ ಸತ್ತುಹೋದನು. ಅದೇ ವಿಧವಾಗಿಯೇ ಕೃಷ್ಣನ ಪಾದಕ್ಕೆ ಬಾಣ ತಗುಲಿ ರಕ್ತ ಸೋರಿ ಸತ್ತುಹೋದನು. ಈ ವಿಧವಾಗಿ ಯೇಸು ಮತ್ತು ಕೃಷ್ಣನ ಜನನ, ಮರಣಗಳು ಎರಡೂ ಒಂದೇ ವಿಧವಾಗಿ ಇರುವುದರಿಂದ ಯೇಸು, ಕೃಷ್ಣನು ಇಬ್ಬರು ಒಂದೇ ದೇವರ ಅವತಾರವೆಂದು ತಿಳಿಯುತ್ತಿದೆ.

ಆದರಣಕರ್ತ ಬರುತ್ತಾನೆ, ಬಂದ ನಂತರ ಯೇಸು ದೇವರೇ ಎಂದು, ಆತನು ಭಗವಂತನೆಂದು ತಿಳಿಸುತ್ತಾನೆಂದು ಇದೆ. ಆದರೆ ಆದರಣಕರ್ತ ಯಾವಾಗ ಬರುತ್ತಾನೆ ಎಂದು ಖಚಿತವಾಗಿ ಹೇಳಲಿಲ್ಲ. ಆದರಣಕರ್ತನಾಗಿ ಬಂದವನು ಮೊದಲು ಬಂದಿರುವ ಯೇಸುವೇ ಎಂದು, ಯೇಸುವಾಗಿ ಬಂದಿರುವವನು ಮೊದಲು ಬಂದಿರುವ ಕೃಷ್ಣನೇ ಎಂದು ನಾವು ತಿಳಿಯುವುದಕ್ಕೆ ಅನೇಕ ಆಧಾರಗಳು ದೊರೆತಿವೆ. ಇಬ್ಬರೇ ಅಲ್ಲ ಮುಂಬರುವವನು ಕೂಡಾ **ಮೂವರು ಒಬ್ಬನೇ** ಎಂದು ತಿಳಿಯುತ್ತಿದೆ. ಮುಂಬರುವ ಆದರಣಕರ್ತ ನನ್ನನ್ನು ಕುರಿತು ಹೇಳುವನೆಂದು ಯೇಸು ಹೇಳಿದಂತೆ ಇದೆ. ಆತನೇ ಈತನಾಗಿರುವಾಗ, ಆತನನ್ನು ಕುರಿತು ಈತನು ಸುಲಭವಾಗಿ ಹೇಳಬಲ್ಲನು. ಮೊದಲು ಹಿಂದೂ

ಸಮಾಜದಲ್ಲಿ ದೇವರು ಮಾನವಾಕಾರದಲ್ಲಿ ಬಂದರೇ 'ಭಗವಂತನು' ಎಂದು ಕರೆದಿದ್ದಾರೆ. ಅದೇ 'ಭಗವಾನ್" ಎನ್ನುವ ಪದವನ್ನು ಇಲ್ಲಿ ಬೈಬಲ್‌ನಲ್ಲಿ ಉಪಯೋಗಿಸದೆ ಆದರಣಕರ್ತಯೆಂದು ಹೇಳುವುದಾಗಿದೆ. ಪ್ರಪಂಚದಲ್ಲಿ ಎಲ್ಲ ಆದರಣಗಳಿಗಿಂತ ಜ್ಞಾನದಲ್ಲಿ ಆದರಿಸುವುದೇ ದೊಡ್ಡದು. ಹಣದ ಆದರಣ ದೊರೆತರೂ, ಬಂಗಾರ ಆದರಣ ದೊರೆತರೂ, ಯಾವ ವಿಷಯದಲ್ಲಿ ಆದರಣ ದೊರೆತರೂ ಅವೆಲ್ಲವೂ ಅಶಾಶ್ವತವಾದ ಆದರಣಗಳೇ ಆಗುವವು. ಜ್ಞಾನದಲ್ಲಿ ಆದರಣ ದೊರೆತರೇ ಜೀವನವೇ ಧನ್ಯವಾಗುವುದು. ಆದ್ದರಿಂದ ಜ್ಞಾನದಲ್ಲಿ ಆದರಿಸುವವನು ಒಬ್ಬ ದೇವರೇ ಇರುತ್ತಾನೆ. ಜ್ಞಾನ ಆದರಣ ದೇವರಿಗೆ ಹೊರತು ಯಾರಿಗೂ ತಿಳಿದಿಲ್ಲ. ದೇವರು ಎಲ್ಲದಕ್ಕು ಕರ್ತನಾದ್ದರಿಂದ ಮನುಷ್ಯನ ರೂಪದಲ್ಲಿ ಬಂದ ಭಗವಂತನನ್ನು ಆದರಣಕರ್ತ ಎಂದು ಹೇಳುವುದಾಗಿದೆ. ದೇವರು ಎರಡು ಜನ್ಮಗಳಲ್ಲಿ ಆದರಣಕರ್ತನಾಗಿ ಬಂದಿದ್ದಾನೆಂದು ಕೃಷ್ಣನು, ಯೇಸು ಇಬ್ಬರೂ ಒಬ್ಬನೇ ಎಂದು ನಮಗೆ ತಿಳಿದಿರುವ ಸತ್ಯವನ್ನು ಅನೇಕಬಾರಿ ಹೇಳಿದ್ದೇವೆ. ಅದನ್ನು ಅರ್ಥಮಾಡಿಕೊಳ್ಳದವರು ನಮ್ಮದು ಮತ ಪ್ರಚಾರವೆಂದು ಕ್ರೈಸ್ತ ಮತವನ್ನು ಹೇಳುತ್ತಿದ್ದಾರೆಂದು ಆರೋಪಿಸಿದ್ದಾರೆ. ನಾವು ಮತಗಳ ಸಾಮರಸ್ಯಕ್ಕೆ ಪ್ರಯತ್ನಿಸುತ್ತಿದ್ದೇವೆ. ಮತಗಳಿಗೆ ಅತೀತವಾದ ಬೋಧನೆಗಳನ್ನು ಹೇಳುತ್ತಿದ್ದೇವೆ. ಅದನ್ನು ಅರ್ಥಮಾಡಿಕೊಳ್ಳದವರು ಅಜ್ಞಾನ ಆರೋಪಣೆಗಳು ಎಷ್ಟು ಮಾಡಿದರೂ ನಾವು ಲೆಕ್ಕಮಾಡುವುದಿಲ್ಲ. ಜ್ಞಾನಿಗಳ ಆರೋಪಣೆಗಳನ್ನು ನಾವು ನೋಡುತ್ತೇವೆ. ನಮ್ಮ ತಪ್ಪುಗಳೇನಾದರೂ ಇದ್ದರೂ ತಿದ್ದುಕೊಳ್ಳುತ್ತೇವೆ. ಆದರೇ ಅಜ್ಞಾನಿಗಳ ಆರೋಪಣೆಗಳನ್ನು ನಾವು ಲೆಕ್ಕಿಸುವುದಿಲ್ಲ. ಆದ್ದರಿಂದ ನಾವು ಹೇಳಬೇಕಾಗಿರುವುದು ಹೇಳುತ್ತೇವೆ. ಕೃಷ್ಣನು ಯೇಸು ಇಬ್ಬರೂ ಒಬ್ಬರೇ ಎಂದು ಹೇಳಿದ್ದೇವೆ. ಈಗ ನಮ್ಮ ವಾದನೆಯನ್ನು ಬಲಪಡಿಸುವ ವಿಧವಾಗಿ ಗಾಡೇಪಲ್ಲಿ ಕುಕ್ಕುಟೇಶ್ವರರಾವುರವರು ಬರೆದಿರುವ **"ಯೇಸು ಕೃಷ್ಣೀಯಂ"** ಎಂಬ ಪದ್ಯ ಕಾವ್ಯವನ್ನು ಕೆಳಗೆ ಜೋಡಿಸುತ್ತಿದ್ದೇವೆ.

ಯೇಸು ಕೃಷ್ಣನು ಒಬ್ಬನೇಯೆಂದರೇ ಹಿಂದೂಗಳು ಯೇಸುವನ್ನು ಎಷ್ಟಾಗಿ ಅಸಹ್ಯಿಸಿಕೊಳ್ಳುತ್ತಿದ್ದಾರೋ, ಅದಕ್ಕೆ ಎರಡಷ್ಟರಾಗಿ ಕೃಷ್ಣನನ್ನು ಕ್ರೈಸ್ತವರು

ಅಸಹ್ಯಿಸಿಕೊಳ್ಳುತ್ತಿದ್ದಾರೆ. ಹಾಗೆಂದು ಯೇಸುನಲ್ಲಿರುವ ಕೆಟ್ಟದು ಏನೋ ಹಿಂದೂಗಳಿಗೆ ತಿಳಿದಿದೆಯಾ ಎಂದರೇ ಅದೇನೂ ತಿಳಿದಿಲ್ಲ. ಹಾಗೆಯೇ ಕೃಷ್ಣನಲ್ಲಿರುವ ಕೆಟ್ಟದೇನೋ ಕ್ರೈಸ್ತರಿಗೆ ತಿಳಿದಿದೆಯಾ ಎಂದರೇ ಅದೇನೂ ಅವರಿಗೂ ಸಹ ತಿಳಿದಿಲ್ಲ. ಏನೂ ತಿಳಿಯದೇ, ಅವರಲ್ಲಿ ಏನೂ ಕೆಟ್ಟದು ಇಲ್ಲದಿದ್ದರೂ ಯಾಕೆ ದೇವರಾದ ಇಬ್ಬರನ್ನೂ ಎರಡು ಮತಗಳವರು ದ್ವೇಷಿಸಿಕೊಳ್ಳುತ್ತಿದ್ದಾರೋ ತಿಳಿದಿಲ್ಲ. ಹಾಗೆ ತಿಳಿಯದೆ ಹೋಗಿರುವುದರಿಂದ ಸ್ವತಃವಾಗಿ ನೇರವಾಗಿ ದೇವರನ್ನೇ ದೂಷಿಸಿದಂತಾಗುತ್ತಿದೆ. ಆ ದೂಷಣೆಯಿಂದ ಭಯಂಕರವಾದ ಪಾಪವು ಮನುಷ್ಯನಿಗೆ ಅಂಟಿಕೊಳ್ಳಬಹುದು. ಅಂತಹ ಪಾಪವು ಸಾಮಾನ್ಯ ಮನುಷ್ಯರಿಗೆ ಬರಬಾರದೆಂಬ ಪ್ರಯತ್ನದಲ್ಲಿ **ಇಬ್ಬರೂ ಒಬ್ಬನೇ** ಎಂಬ ಈ ವಿಷಯಗಳನ್ನು ಇಷ್ಟು ಆಳವಾಗಿ ಹೇಳಬೇಕಾಗಿ ಬಂದಿದೆ.

**ಯೇಸು ಪರವಾಗಿ...**

ಗೀ. **ಮರಿಯ, ಲೋಲತ ನೆಲಲು ಸಮಾಪ್ತಿನಮರ**
**ಜಂತುಸಾಕ್ಷಿಕ ನಿರ್ಬಂಧಶಾಲಲೋನ**
**ದೇವ ಕೀಲಾಭಮೂರ್ತಿಯ್ಯೆ ದೇವದೇವು**
**ಡವನಿ ಬ್ರಭವಿಂಚೆ ದೈವಜ್ಞುಲಾತ್ಮ ನಲರ.** 1

**ಅರ್ಥ:** ಮರಿಯ=ಮರಿಯಮ್ಮ ಎಂಬ ಕನ್ಯೆ, ಲೋಲತನ್=ಕ್ಷೋಭೆಯಿಂದ, ನೆಲಲು ಸಮಾಪ್ತಿನ್=ಗರ್ಭವಿತಿಯಾಗಿ ತಿಂಗಳು ತುಂಬಿರುವುದರಿಂದ, ಅಮರನ್=ಒಪ್ಪಿರುವಾಗ, ಜಂತು ಸಾಕ್ಷಿಕ=ಪಶುಗಳು ನಿಂತು ನೋಡುತ್ತಿರುವ, ನಿರ್ಬಂಧ ಶಾಲನ್=ಆ ಪಶುಗಳು ಬಂಧಿಸಲ್ಪಟ್ಟ ಶಾಲೆಯಲ್ಲಿ, ದೇವ=ದೈವ ಸಂಬಂಧವಾದ, ಕೀಲಾ+ಅಗ್ನಿ ತೇಜಸ್ಸಿನಿಂದ, ಆಭ=ಸಮಾನವಾದ, ಮೂರ್ತಿಯ್ಯೆ= ಆಕಾರ ಇರುವವನಾಗಿ, ದೇವದೇವುಂಡು= ದೇವತೆಗಳಿಗೇ ದೇವರೆಂದು ಹೇಳಲ್ಪಟ್ಟಿರುವ ಕ್ರೀಸ್ತು, ಅವನಿನ್= ಭೂಮಿಮೇಲೆ, ದೈವಜ್ಞುಲು=

ದಿವ್ಯನಕ್ಷತ್ರವನ್ನು ಅನುಸರಿಸಿ ಬಂದಿರುವ ಮೂವರು ಪೂರ್ವ ದೇಶ ಜ್ಞಾನಿಗಳು, ಆತ್ಮನ್= ಅವರವರ ಮನಸ್ಸಿನಲ್ಲಿ, ಅಲರನ್= ಸಂತೋಷಿಸುವಾಗ, ಪ್ರಭವಿಂಚೆನ್= ಜನ್ಮಿಸುವನು.

**ತಾತ್ಪರ್ಯ:** ಮರಿಯಮ್ಮ ಕ್ಷೋಭೆ ಹೊಂದುತ್ತಿರುವಾಗ ತಿಂಗಳು ತುಂಬಿವೆ. ಅಗ್ನಿ ತೇಜಸ್ಸಿರುವ ದೇವದೇವರಾದ ಯೇಸು ಪಶುಗಳಶಾಲೆಯಲ್ಲಿ ಆಕೆ ಹೊಟ್ಟೆಯಿಂದ ಜನ್ಮಿಸುತ್ತಾನೆ. ಪ್ರಭು ಜನನಕ್ಕೆ ಪೂರ್ವದೇಶ ಜ್ಞಾನಿಗಳು ಸಂತೋಷಿಸಿದ್ದಾರೆ.

***ಕೃಷ್ಣಪರವಾಗಿ ...***

ಗೀ. **ಮರಿ ಯಲೋಲತ ನೆಲಲು ಸಮಾಪ್ತಿ ನಮರ**
**ಜಂತುಶಾಕ್ಷಿಕ ನಿರ್ಬಂಧಶಾಲಲೋನ**
**ದೇವಕೀ ಲಭಮೂರ್ತಿಯೈ ದೇವುದೇವು**
**ಡವನಿ ಬ್ರಭವಿಂಚೆ ದೈವಜ್ಞು ಲಾತ್ಮನಲರ.** 1

**ಅರ್ಥ:** ನೆಲಲು=ಒಂಭತ್ತು ತಿಂಗಳುಗಳು, ಮರಿ+ಅಲೋಲತನ್=ಎಷ್ಟುಮಾತ್ರ ಅಪಜಯವಿಲ್ಲದೆ, ಸಮಾಪ್ತಿನ್=ತುಂಬಿರುವುದರಿಂದ, ಅಮರ=ಒಪ್ಪಿರುವಾಗ, ಜಂತು ಸಾಕ್ಷಿಕ=ವಸುದೇವನು ಕಾಲು ಹಿಡಿದುಕೊಂಡ ಕತ್ತೆ ನಿಂತು ನೋಡುತ್ತಿರುವ, ನಿರ್ಬಂಧಶಾಲನ್=ಸೆರೆಮನೆಯಲ್ಲಿ, ದೇವಕೀ=ದೇವಕೀ ದೇವಕಿ, ಲಾಭ_ಮೂರ್ತಿಯೈ=ಲಭ್ಯನಾದವನಾಗಿ, ದೇವದೇವುಂಡು=ವಿಷ್ಣುವು, ಅವನಿನ್=ಭೂಮಿಮೇಲೆ, ದೈವಜ್ಞರು=ದೈವತತ್ವವನ್ನು ತಿಳಿದಿರುವ ದಯೆಯಿರುವವರು ಮೊದಲಾದವರು, ಆತ್ಮನ್=ಅವರವರ ಮನಸ್ಸುಗಳಲ್ಲಿ, ಅಲರ= ಸಂತೋಷಿಸುವಾಗ, ಪ್ರಭವಿಂಚೆನ್=ಜನ್ಮಿಸುವನು.

**ತಾತ್ಪರ್ಯ:** ಗರ್ಭ ವಿಷಯದಲ್ಲಿ ನೂಕಾಟಹೊಯ್ದಾಡುವುದಿಲ್ಲದೆ ತಿಂಗಳುಗಳು ತುಂಬಿವೆ. ಎದುರುಗಡೆ ಕತ್ತೆನಿಂತು ನೋಡುತ್ತಿರುವ ಸೆರೆಮನೆಯಲ್ಲಿ, ವಿಷ್ಣುವು ದೇವಕೀ ದೇವಕಿ ಜನ್ಮಿಸುವನು. ಕೃಷ್ಣತತ್ವವನ್ನು ಅರ್ಥಮಾಡಿಕೊಂಡಿರುವವರು ದಯೆಇರುವವರು ಇತರರು ಸಂತೋಷಿಸಿದ್ದಾರೆ.

**ಯೇಸು ಪರವಾಗಿ...**

ಗೀ. **ಹೆ ಹೆ! ಹೆರ್ರೈದುಡು, ಭೂಜಾನಿ, ಹೇಯಬುದ್ಧಿ'**
**ಮಾತುಲುಂಡು, ರೇಗಿ ಶಿಶುಪರಂಪರನು ದುನಿಮ್,**
**ದೈವ ಮಗುಪಟ್ಟಿ ಮರ್ತ್ಯುಡೌ ತದ್ವಿರೋಧಿ**
**ಕನ್ನುಲಂ ಗಪ್ಪಿ ಪಿತತೋಡಂ ಗದಲಿ ಚನಿಯೆ.** 2

**ಅರ್ಥ:** ಹೆ ಹೆ!=ಹಿ ಹೀ! (ಪರಿಹಾಸ್ಯಮಾಡು), ಹೆರ್ರೈದುಂಡು=ಹೆರೋದ್ ಎನ್ನುವಾತ, ಭೂಜಾನಿ=ಆ ದೇಶದ ರಾಜು, ಹೇಯಬುದ್ಧಿ=ನೀಚಬುದ್ಧಿ ಇರುವವನು, ಮಾ+ಅತಲುಂಡು=ಲಕ್ಷ್ಮಿಯಲ್ಲಿ(ಸಂಪದದಲ್ಲಿ) ಸಾಟಿಇಲ್ಲದವನು, ರೇಂಗು=ವಿಜೃಂಬಿಸಿ, ಶಿಶುಪರಂಪರನು=(ಎರಡುವರ್ಷ ವಯಸ್ಸಿಗೆ ಒಳಗಿರುವ) ಮಕ್ಕಳೆಲ್ಲರನ್ನು, ತುನಿಮನ್= ಸಾಯಿಸುವನು, ದೈವವು+ಅಗು=ದೇವರಾದ, ಪಟ್ಟಿ=ಶಿಶುವು (ಯೇಸು), ಮರ್ತ್ಯುಂಡೌ=ಮರಣಶೀಲನಾಗಿ ಕೇವಲಮು=ನರನಾದ (ಮನುಷ್ಯನಾದ), ತತ್+ವಿರೋಧಿ=ಆ ಶತ್ರುವೊಬ್ಬರ (ಹೆರೋದ್ ಒಬ್ಬರ), ಕನ್ನುಲನ್+ಕಪ್ಪಿ= ಕಣ್ಣುಗಳಿಗೆ ಮಾಯೆ ಕಲ್ಪಿಸಿ, ಪಿತತೋಡನ್=ತಂದೆಯೊಂದಿಗೆ (ಜೋಸೆಪುನೊಂದಿಗೆ), ಕದಲಿ–ಚನಿಯೆನ್=ಬಿಟ್ಟು ಹೋಗುವನು.

**ತಾತ್ಪರ್ಯ:–** ಹೆರೋದ್ ರಾಜು ನೀಚಬುದ್ಧಿ ಇರುವವನು, ಸಾಟಿ ಇಲ್ಲದ ಸಂಪದವಿರುವವನು. ಅಂದಿಗೆ ಎರಡುವರ್ಷ ವಯಸ್ಸಿಗೆ ಒಳಗಿರುವ ಮಕ್ಕಳೆಲ್ಲರನ್ನು ಸಾಯಿಸುತ್ತಿದ್ದನು. **ಆದರೇ ಏಸು ದೈವವು,** ವಿರೋಧಿ ಮಾನವಮಾತ್ರವಿದ್ದಾನೆ. ಆದಕಾರಣ ಹೆರೋದ್ ರಾಜು ಕಣ್ಣು ತಪ್ಪಿಸಿ ಯೇಸು, ತಂದೆ ಹಿಂದೆ ಕದಲಿ ಎಲ್ಲೋ ಬಿಟ್ಟು ಹೋದನು.

***ಕೃಷ್ಣಪರವಾಗಿ...***

ಗೀ. **ಹೆ ಹೆ! ಹೆರ್ರೈದುಡು, ಭೂಜಾನಿ, ಹೇಯಬುದ್ಧಿ,**
**ಮಾತುಲುಡು ರೇಗಿ ಶಿಶುಪರಂಪರನು ದುನಿಮೆ;**
**ದೈವ ಮಗುಪಟ್ಟಿ ಮರ್ತ್ಯುಡೌ ತದ್ವಿರೋಧಿ**
**ಕನ್ನುಲಂ ಗಪ್ಪಿ ಪಿತತೋಡ ಗದಲಿ ಚನಿಯೆ;** 2

**ಅರ್ಥ:–** ಹೆ ಹೆ!=ಹಿ ಹೀ! (ಪರಿಹಾಸ್ಯಮಾಡು) ರೈದುಂಡು= (ಆಶ್ರಿತರಿಗೆ) ಧನವನ್ನು ಕೊಡುವವನು, ಭೂಜಾನಿ=ರಾಜು, ಹೇಯಬುದ್ಧಿ=ನೀಚಬುದ್ಧಿ ಇರುವವನು, ಮಾತುಲುಂಡು=ಕೃಷ್ಣನ ಭಾವಮೈದನಾದ ಕಂಸನು, ರೇಂಗಿ= ವಿಜೃಂಭಿಸಿ, ಶಿಶು ಪರಂಪರೆಯನ್ನು=ದೇವಕೀದೇವಿ ಮಕ್ಕಳೆಲ್ಲರನ್ನು, ತುನಿಮನ್= ಖಂಡಿಸಿದ್ದಾನೆ, ದೈವವು+ಅಗು=ದೇವರಾದ, ಪಟ್ಟಿ=ಶಿಶುವು (ಕೃಷ್ಣನು), ಮರ್ತ್ಯುಂಡೌ=ಮರಣಶೀಲನಾದ, ತತ್+ವಿರೋಧಿ=ಆ ಶತ್ರುವಾದ ಕಂಶನ ಒಂದರ, ಕನ್ನುಲನ್+ಕಪ್ಪಿ=ಕಣ್ಣುಗಳಿಗೆ ಮಾಯೆ ಕಲ್ಪಿಸಿ, ಪಿತತೋಡನ್= ತಂದೆಯಾದ ವಸುದೇವನೊಂದಿಗೆ, ಕದಲಿ–ಚನಿಯೆನ್=ಬಿಟ್ಟು ಹೋದನು.

**ತಾತ್ಪರ್ಯ:–** ಆಶ್ರಿತರಿಗೆ ಧನವನ್ನು ಕೊಡುವ ರಾಜನನ್ನು, ಭಾವಮೈದನಾದ ಕಂಸನು ನೀಚಬುದ್ಧಿ ಇರುವವನು, ದೇವಕೀದೇವಿ ಮಕ್ಕಳನ್ನು ಕ್ರಮವಾಗಿ ಖಂಡಿಸಿದ್ದಾನೆ. ಆದರೇ ದೈವವಾದ ಶ್ರೀ ಕೃಷ್ಣನು ಮರಣಶೀಲನಾದ ಕಂಸನ ಕಣ್ಣುಗಳಿಗೆ ಮಾಯೆ ಕಲ್ಪಿಸಿ ತಂದೆಯಾದ ವಸುದೇವನೊಂದಿಗೆ ಕದಲಿ ತಪ್ಪಿಸಿಕೊಂಡು ಹೋದನು.

***ಯೇಸು ಪರವಾಗಿ...***

ಗೀ. **ಆತಡಾನಂದ ಜನಕತ ನಲ್ಲ ಪೆರಿಗಿ,**
**ಯೇಸು ಜನರಕ್ಷಕಖ್ಯಾತಿ ನೆಸಗಿ, ಗೊಲ್ಲ**
**ಡೈ ನಿಜಾಧೀನ ಪಶುವುಲ ನರಸಿಕಾಚಿ**
**ಕೊನುಚು ವಿಹರಿಂಚೆ ಗೊಂಡಲ ಗೋನಲಂದು.** 3

**ಅರ್ಥ:** ಅತಂಡು=ಆ ಮಗುವು, ಆನಂದ ಜನಕತನ್=ಆನಂದವನ್ನು ಉಂಟುಮಾಡುವವನಾಗಿ, ಅಲ್ಲನ್=ಕ್ರಮವಾಗಿ, ಪೆರಿಗಿ=ಬೆಳೆದು, ಯೇಸು= ಯೇಸು ಎಂಬ ಹೆಸರಿನಿಂದ, ಜನರಕ್ಷಕ–ಖ್ಯಾತಿನ್=ಜನರಿಗೆ ರಕ್ಷಕನೆಂಬ ಕೀರ್ತಿಯಿಂದ, ಎಸಂಗಿ=ಒಪ್ಪಿ, ಗೊಲ್ಲಂಡೈ=ಗೊಲ್ಲರವರ ವೃತ್ತಿಯನ್ನು ಅವಲಂಬಿಸಿರುವವನಾಗಿ, ನಿಜ+ಆಧೀನ=ತನ್ನವಶವಾಗಿರುವ, ಪಸುವುಲನ್=

ಕುರಿಗಳನ್ನು, ಅರಸಿ= ಜಾಗ್ರತೆಯಾಗಿ ನೋಡಿ, ಕಾಚಿಕೊನುಚುನ್= ಕಾಪಾಡಿಕೊಳ್ಳುತ್ತ, ಕೊಂಡಲನ್= ಬೆಟ್ಟಗಳಲ್ಲು, ಕೋನಲನ್=ಕಣಿವೆಯಲ್ಲು, ವಿಹರಿಂಚೆನ್=ಸಂಚರಿಸುವನು.

**ತಾತ್ಪರ್ಯ:–** ಆ ಮಗುವು ಎಲ್ಲರಿಗು ಆನಂದವನ್ನು ಉಂಟುಮಾಡುತ್ತ ಬೆಳೆಯುವನು. ಯೇಸು ಎಂಬ ಹೆಸರು ಹೊಂದಿದ್ದು ಜನರಕ್ಷಕನೆಂಬ ಕೀರ್ತಿಯನ್ನು ಗಳಿಸಿ ಗೊಲ್ಲನವನಹಾಗೆ ಕುರಿಗಳನ್ನು ಕಾಯುತ್ತಾ ಬೆಟ್ಟಗಳಲ್ಲಿ ಕಣಿವೆಗಳಲ್ಲಿ ವಿಹರಿಸುತ್ತಾನು.

**ಕೃಷ್ಣ ಪರವಾಗಿ...**

ಗೀ. **ಆತಡಾ ನಂದಜನಕ ನಲ್ಲ ಪೆರಿಗಿ**
**ಯೇ, ಸುಜನ ರಕ್ಷಕಖ್ಯಾತಿ ನೆಸಂಗಿ, ಗೊಲ್ಲಂ**
**ಡ್ಮೆ ನಿಜಾಧೀನ ಪಶುವುಲ ನರಸಿಕಾಚಿ**
**ಕೊನುಚು ವಿಹಾರಿಂಚೆ ಕೊಂಡಲ ಗೋನಲಂದು.** 3

**ಅರ್ಥ:** ಅತಡು= ಆ ಮಗುವು ಆ=ಆವಿಧವಾಗಿ, ನಂದಜನಕತನ್= ಅಂದರೇ ನಂದನಿಗೆ ಕುಮಾರನಾಗಿ, ಅಲ್ಲನ್=ಕ್ರಮವಾಗಿ, ಪೆರಿಗಿಯೇ=ಬೆಳೆಯುತ್ತಲೇ, ಸುಜನ ರಕ್ಷಕ ಖ್ಯಾತಿನ್=ಸಜ್ಜನರನ್ನು ರಕ್ಷಿಸಬಲ್ಲೆನೆಂಬ ಕೀರ್ತಿಯಿಂದ, ಎಸಂಗಿ=ಒಪ್ಪಿ, ಗೊಲ್ಲಂಡ್ಮೆ=ಗೊಲ್ಲನವನಾಗಿ, ನಿಜ+ಆಧೀನ=ತನ್ನವಶದಲ್ಲಿದ್ದು, ಪಶುವುಲನ್= ಹಸುಗಳನ್ನು, ಅರಸಿ=ಜಾಗ್ರತೆಯಾಗಿ ನೋಡಿ, ಕಾಚಿ ಕೊನುಚುನ್=ದೂಡಿಕಾಪಾಡಿಕೊಳ್ಳುತ್ತ, ಕೊಂಡಲನ್=ಬೆಟ್ಟಗಳಲ್ಲು, ಕೋನಲಂದು=ಕಣಿವೆಗಳಲ್ಲು, ವಿಹರಿಂಚೆನ್=ಸಂಚರಿಸುವನು.

**ತಾತ್ಪರ್ಯ:–** ಆ ಮಗುವು ನಂದನೇ ತಂದೆಯಾಗಿ ಬೆಳೆಯುವನು. ಸುಜನ ರಕ್ಷಕನೆಂಬ ಕೀರ್ತಿಯನ್ನು ಗಳಿಸಿ, ಹಸುಗಳನ್ನು ಕಾಯುತ್ತಾ ಬೆಟ್ಟಗಳಲ್ಲಿ ಕಣಿವೆಗಳಲ್ಲಿ ವಿಹರಿಸುತ್ತಾನೆ.

***ಯೇಸು ಪರವಾಗಿ...***

ಗೀ. **ಆ ಪುಡಮಿರೇಡು ದಶ್ಶಾಸನಾಭಿಮಾನಿ**
**ರಾಕ್ಷಸುಡು, ದೇವಸೂತಿಪೈ ರವುಲು ಕಕ್ಷ**
**ಬಟ್ಟಿ ಬಂಧಿಂಚಿ ಶಿಕ್ಷಿಂಪವಲಯಯು ನನುಚು**
**ಬನ್ನು ನತಡಿಂಕ ನೇಮಿ ಕಾನುನ್ನವಾಡೊ!** **4**

**ಅರ್ಥ:** ಆಪುಡಮಿ ರ್ರೆಂಡು=ಆ (ಯೂದುವಂಶದ) ರಾಜು, ದುಶ್ಶಾ ಸನ=ಕೆಟ್ಟ ಶಾಸನಗಳು ಮಾಡುವುದರಲ್ಲಿ, ಅಭಿಮಾನಿ=ಇಚ್ಛೆಇರುವವನು, ರಾಕ್ಷಸುಂಡು= ಮಹಾಕ್ರೂರನು, ದೇವಸೂತಿಪ್ಯೆ=ದೇವರ ಕುಮಾರನಾದ ಯೇಸುವಿನ ಮೇಲೆ, ರವುಲು–ಕಕ್ಷನ್=ಉರಿಯುತ್ತಿರುವ ದ್ವೇಷದಿಂದ, ಪಟ್ಟಿ–ಬಂಧಿಸಿ= ಹಿಡಿದುಕೊಂಡು ನಿರ್ಬಂಧಿಸಿ, ಶಿಕ್ಷಿಂಪವಲಯಿುನ್+ಅನುಚು= ದಂಡಿಸಬೇಕೆಂದು, ಪನ್ನುನ್= ಪ್ರಯತ್ನಿಸುತ್ತಿದ್ದಾನೆ, ಅತಂಡು=ಆ ಯೇಸು, ಇಂಕನ್=ಇನ್ನುಮೇಲೆ, ಏಮಿ ಕಾನುನ್ನ ವಾಂಡಾ!=ಏನಾಗುತ್ತಿದ್ದಾನೋ! (ಮೃತ್ಯುವಿಗೆ ಗುರಿಯಾಗಲಿದ್ದಾನೆ ಅಲ್ಲವೇ! ಎಂದು ಧ್ವನಿ.)

**ತಾತ್ಪರ್ಯ:–** ಆ ಯೂದುವಂಶದ ರಾಜು ಮಹಾಕ್ರೂರನು, ಭಯಂಕರ ಶಾಸನಗಳು ಮಾಡುವ ಸ್ವಭಾವವಿರುವವನು. ದೇವರ ಕುಮಾರನಾದ ಯೇಸುಮೇಲೆ ಕಕ್ಷೆ ತುಂಬಿಕೊಂಡಿದ್ದಾನೆ. ಹೇಗಾದರೂ ಹಿಡಿದು ಬಂಧಿಸಿ ಶಿಕ್ಷಿಸಬೇಕೆಂದು ಪ್ರಯತ್ನಿಸುತ್ತಿದ್ದಾನೆ. ಪಾಪ! ಆ ಯೇಸು ಏನು ಆಗುತ್ತಾನೋ ಅಲ್ಲವೇ!

***ಕೃಷ್ಣ ಪರವಾಗಿ...***

ಗೀ. **ಆ ಪುಡಮಿರೇಡು ದುಶ್ಶಾಸನಾಭಿಮಾನಿ**
**ರಾಕ್ಷಸುಡು, ದೇವಸೂತಿಪೈ ರವುಲು ಕಕ್ಷ**
**ಬಟ್ಟಿ ಬಂಧಿಸಿ ಶಿಕ್ಷಿಂಪ ವಲಯು ನನುಚು**
**ಬನ್ನು ನತಂಡಿತ ನೇಮಿ ಕಾನುನ್ನವಾಂಡೊ** 4

**ಅರ್ಥ:** ಆ ಪುಡಮಿರೇಡು=ರಾಜನಾದ ಆ ದುರ್ಯೋಧನನು, ದುಶ್ಶಾಸನ=ತಮ್ಮನಾದ ದುಶ್ಶಾಸನಿಗೆ, ಅಭಿಮಾನಿ=ಗೌರವಪಾತ್ರನು, ರಾಕ್ಷಸುಂಡು=ರಾಕ್ಷಸ ಅಂಶದಿಂದ ಜನ್ಮಿಸಿದವನು, ದೇವಸೂತಿಪೈ=ವಸುದೇವ ಕುಮಾರನಾದ ಕೃಷ್ಣನ ಮೇಲೆ (ನಾಮದಲ್ಲಿ ಏಕ ದೇಶಗ್ರಹಣವು ಶಾಸ್ತ್ರಸಮ್ಮತವು), ರವುಲು ಕಕ್ಷನ್=ಉರಿಯುತ್ತಿರುವ ದ್ವೇಷದಿಂದ, (ಕೃಷ್ಣನು ರಾಯಬಾರಿಗೆ ಹೋದಾಗ) ಹಿಡಿದು ಬಂಧಿಸಿ=ಹಿಡಿದುಕೊಂಡು ಹಗ್ಗದಿಂದ ಕಟ್ಟಿ, ಶಿಕ್ಷಿಂಪವಲಯುನು+ ಅನುಚುನ್=ದಂಡಿಸಬೇಕೆಂದು, ಪನ್ನುನ್= ಪ್ರಯತ್ನಿ ಸುತ್ತಿದ್ದಾನೆ, ಇಂಕನ್=ಇನ್ನು ಮೇಲೆ, ಅತಂಡು=ಆ ದುರ್ಯೋಧನನು, ಏಮಿ ಕಾನುನ್ನವಾಂಡೋ!= ಏನು ಆಗುತ್ತಾನೋ ಅಲ್ಲವೇ! (ಮೃತ್ಯುವಿಗೆ ಗುರಿಯಾಗುತ್ತಿದ್ದಾನೆಂದು ಧ್ವನಿ).

**ತಾತ್ಪರ್ಯ:–** ದುರ್ಯೋಧನ ನೃಪತಿ ರಾಕ್ಷಸ ಅಂಶದಿಂದ ಜನ್ಮಿಸಿರುವವನು, ದುಶ್ಶಾಸನನಿಗೆ ಗೌರವಪಾತ್ರನು, ವಸುದೇವ ಸುತ(ಮಗ)ನಾದ ಕೃಷ್ಣನಮೇಲೆ ಕಕ್ಷೆಯನ್ನು ತುಂಬಿಟ್ಟಿಕೊಂಡು ಹಗ್ಗದಿಂದ ಬಂಧಿಸಿ ಶಿಕ್ಷಿಸಬೇಕೆಂದು ಪ್ರಯತ್ನಿ ಸುತ್ತಿದ್ದಾನೆ. ಆ ದುರ್ಯೋಧನನು ಏನಾಗುತ್ತಾನೋ ಅಲ್ಲವೇ!

**ಯೇಸುಪರವಾಗಿ...**

**ಕ.** **ಶ್ರೀಕಲಿತ ವಿಶ್ವರೂಪ**
**ಪ್ರಾಕಟ ದರ್ಶನಮು ಗ್ರುಡ್ಡಿವಾನಿಕಿ ನಿಡೆ ಸು**
**ಶ್ಲೋಕುಂಡು, ಬಾಪುರೆ! ಯಹೋ**
**ವಾ ಕನ್ನಯ್ಯಕು ಸಮುಂಡು ಪ್ರಭುಡು ಕಲಂಡೇ!** 5

**ಅರ್ಥ:** ಸುಶ್ಲೋಕುಂಡು=ಅಧಿಕವಾಗಿ ಕೀರ್ತಿಸಲು ಸರಿಯಾದವನು, ಶ್ರೀಕಲಿತ=ಕಾಂತಿವಂತವಾದ, ವಿಶ್ವ=ಈ ಪ್ರಪಂಚದೊಂದರ, ರೂಪ=ಆಕಾರವನ್ನು, ಪ್ರಾಕಟ–ದರ್ಶನಮು=ಚೆನ್ನಾಗಿ, ದರ್ಶಿಸಬಲ್ಲ ದೃಷ್ಟಿಯನ್ನು, ಗ್ರುಡ್ಡಿವಾನಿಕಿನ್+ ಇಡೆ=ಒಂದಾನೊಂದು ಕುರುಡನಿಗೆ ಕೊಟ್ಟನು, ಬಾಪುರೇ!=ಔರಾ!,

ಯಾಹೋವಾ–ಕನ್ನಯ್ಯಕು=ಯಹೋವಾ ಕುಮಾರನಾದ ಯೇಸುವಿಗೆ, ಸಮುಂಡು=ಸಾಟಿಯಾದವನು, ಪ್ರಭುಂಡು=ದೈವವು, ಕಲಂಡೇ!=ಎಲ್ಲಾದರೂ ಇದ್ದಾನಾ! (ಇಲ್ಲವೆಂದು)

**ತಾತ್ಪರ್ಯ:–** ಅಧಿಕವಾಗಿ ಕೀರ್ತಿಸಲುತಕ್ಕ ಯೇಸು, ಒಂದಾನೊಂದು ಕುರುಡನಿಗೆ ಪ್ರಪಂಚವನ್ನು ದರ್ಶಿಸುವ ನಿಮಿತ್ತ ದೃಷ್ಠಿ ಕೊಟ್ಟನು. ಆಹಾ! ಯಹೋವಾ ಕುಮಾರನಾದ ಯೇಸುವಿಗೆ ಸಾಟಿಯಾದ ದೇವರೇ ಇಲ್ಲ.

**ಕೃಷ್ಣಪರವಾಗಿ...**

**ಕ.** **ಶ್ರೀಕಲಿತ ವಿಶ್ವರೂಪ**
**ಪ್ರಾಕಟ ದರ್ಶನಮು ಗ್ರುಡ್ಡಿವಾನಿಕಿ ನಿಡೆ ಸು**
**ಶ್ಲೋಕುಂಡು, ಬಾಪುರೆ! ಯಹೋ!**
**ವಾ! ಕನ್ನಯ್ಯಕು ಸಮುಂಡು ಪ್ರಭುಡು ಗಲಂಡೇ!**

**ಅರ್ಥ:** ಸುಶ್ಲೋಕುಂಡು=ಅಧಿಕವಾಗಿ ಕೀರ್ತಿಸಲು ಸರಿಯಾದವನು, ಶ್ರೀಕಲಿತ=ಕಾಂತಿವಂತವಾದ, ವಿಶ್ವರೂಪ=(ತನ್ನಲ್ಲಿ) ವಿಶ್ವರೂದೊಂದರ, ಪ್ರಾಕಟ–ದರ್ಶನಮು=ಚೆನ್ನಾಗಿ, ದರ್ಶಿಸಬಲ್ಲ ದೃಷ್ಠಿಯನ್ನು, ಗ್ರುಡ್ಡಿವಾನಿಕಿನ್+ ಇಡೆ= ಧೃತರಾಷ್ಟ್ರನಿಗೆ ಪ್ರಸಾದಿಸಿದನು, ಬಾಪುರೇ!=ಔರಾ!, ಅಹೋ!=ಆಹೋ!, ವಾ!=ವಹ್ವಾ! (ಈಮೂರು ಪ್ರಶಂಸೆ ಮಾತುಗಳು), ಕನ್ನಯ್ಯಕು–ಸಮುಂಡು= ಕೃಷ್ಣನಿಗೆ ಸಾಟಿಯಾದವನು, ಪ್ರಭುಂಡು–ಕಲಂಡೇ!=ದೈವವು ಇದೆಯಾ! (ಇಲ್ಲವೆಂದು)

**ತಾತ್ಪರ್ಯ:–** ಕೀರ್ತಿಸಲುತಕ್ಕ ಶ್ರೀಕೃಷ್ಣನು ಮಹಾಕಾಂತಿವಂತವಾದ ತನ್ನ ವಿಶ್ವರೂಪವನ್ನು ಧೃತರಾಷ್ಟ್ರನಿಗೆ ತೋರಿದ್ದಾನೆ. ಆಹಾ! ಕೃಷ್ಣನಿಗೆ ಸಾಟಿಯಾದ ದೈವವು ಮತ್ತೊಬ್ಬನು ಇಲ್ಲವಲ್ಲಾ!

**ಯೇಸು ಪರವಾಗಿ...**

**ಗೀ. ಸತ್ಯ ಭಾಮಾ ಕರಗ್ರಹ ಸರಸಸತ್ತ್ವ**
**ಡಗುಚು, ಧರ್ಮಜಯಮುನ ನಿತ್ಯಾಭಿಮಾನ**
**ಮೊದವ ನಾಶೀಲಿ ಯರಿವರ್ಗವಿದಳನಮುನ**
**ದಂಡಿ ಮಗಡಾಯೆ, ನರಬೋಧಕುಂಡು ನಾಯೆ.** 6

**ಅರ್ಥ:–** ಆಶೀಲಿ=ಶೀಲವಂತನಾದ ಆ ಪುರುಷನು, ಸತ್ಯ=ಸತ್ಯವೆಂಬ, ಭಾಮಾ=ಸ್ತ್ರೀಯನ್ನು, ಕರಗ್ರಹ=ಕೈಹಿಡಿಯುವುದರಿಂದ, ಸರಸ= (ದಯಾ) ರಸದಿಂದ ಕೂಡಿರುವ, ಸತ್ತ್ವಂಡು+ಅಗುಚುನ್=ಸತ್ತ್ವದಲ್ಲಿ ಪ್ರಧಾನನಾಗಿದ್ದು, ಧರ್ಮ–ಜಯಮುನನ್= ಧರ್ಮವೇ ಜಯಿಸಿ ತೀರಬೇಕೆಂಬ ವಿಷಯದಲ್ಲಿ, ನಿತ್ಯ+ಅಭಿಮಾನವು+ಒದವನ್=ಎಲ್ಲಿಲ್ಲದ ಅಭಿಮಾನ ಉಂಟಾದಾಗ, ಅರಿವರ್ಗ= ಕಾಮಕ್ರೋಧ ಲೋಭಮೋಹ ಮದಮಾತ್ಸರ್ಯಗಳೆಂಬ ಅರಿಷಡ್ವರ್ಗವನ್ನು, ವಿಧಳನಮುನನ್=(ತನಯುಂದು) ಹೊಡೆದಾಕುವುದರಿಂದ, ದಂಡಿ= ಆವೇಶನವನಾದ, ಮಗಡು+ಆಮೆ=ವೀರನಾಗಿದ್ದಾನೆ, (ಹಾಗೆಯೇ) ನರ=ತನ್ನ ಜೊತೆಯವರಾದ ಜನರಿಗೆ, ಬೋಧಕುಂಡು+ಆಯೆ=ಬೋಧಕನು ಕೂಡಿದ್ದಾನೆ.

**ತಾತ್ಪರ್ಯ:–** ಆ ಶೀಲವಂತನು ಸತ್ಯವೆಂಬ ಸ್ತ್ರೀಯನ್ನು ಕೈಹಿಡಿದು, ದಯಾರಸ ಇರುವವನಾಗಿ ಸತ್ತ್ವಗುಣ ಪ್ರಧಾನನಾಗಿದ್ದು, ಧರ್ಮವೇ ಜಯಿಸಬಲ್ಲದೆಂಬ ನಿಶ್ಚಯವಾಗಿ ಇರುತ್ತಾನೆ. ಕಾಮ ಕ್ರೋಧಾದಿ ಅರಿಷಡ್ವರ್ಗವನ್ನು ಜಯಿಸಿ ತನ್ನಜೊತೆಯಾದ ಜನರಿಗೆ ಬೋಧಕನಾಗಿ ಜೀವಿಸಿದನು.

**ಕೃಷ್ಣಪರವಾಗಿ...**

**ಗೀ. ಸತ್ಯಭಾಮಾ ಕರಗ್ರಹಾ ಸರಸ ಸತ್ತ್ವ**
**ಡಗುಚು, ಧರ್ಮಜ ಯಮುನ ನಿತ್ಯಾಭಿಮಾನ**
**ಮೊದವ ನಾ ಶೀಲಿ ಅರಿವರ್ಗವಿದಳನಮುನ**
**ದಂಡಿ ಮಗಡಾಯ, ನರಬೋಧಕುಂಡು ನಾಯೆ. 6**

**ಅರ್ಥ:** ಆಶೀಲಿ=ಶೀಲವಂತನಾದ ಆ ಪುರುಷನು, ಸತ್ಯಭಾವಾ= ಸತ್ಯಭಾಮವನ್ನು, ಕರಗ್ರಹಾ=ವಿವಾಹವಾಗುವುದರಿಂದ, ಸರಸ=(ಶೃಂಗಾರ) ರಸದೊಂದಿಗೆ ಕೂಡಿರುವ, ಸತ್ತ್ವಂಡಗುಚು=ದೇವಗುಣವಾದ ಸತ್ತ್ವಗುಣದಿಂದ ವಿಶಿಷ್ಟನಾದ, ಧರ್ಮಜ=ಧರ್ಮರಾಜನೊಬ್ಬನ, ಯಮುನ=ಯಮುನಾ ನದಿ ದೇವತೆ ಒಬ್ಬಳ, ನಿತ್ಯ+ಅಭಿಮಾನವು=ಎಲ್ಲಿಲ್ಲದ ಪೂಜ್ಯ ಭಾವವು, ಒದವನ್= ತನ್ನಲ್ಲಿ ಹೊಂದಿರುವಾಗ, ಅರಿವರ್ಗ=ಶತ್ರುಗಳಾದ ಕೌರವ ಇತರರನ್ನು, ವಿದಳನಮುನನ್=ಸಂಹರಿಸುವ ವಿಷಯದಲ್ಲಿ, ನರ=ಅರ್ಜುನನಿಗೆ, ಬೋಧ ಕುಂಡುನ್=ಗೀತ ಬೋಧಿಸಿರುವವನನ್ನು, ದಂಡಿ–ಮಗಡುನ್=ದೊಡ್ಡವೀರನು, ಆಯೆ=ಆಗಿದ್ದಾನೆ.

**ತಾತ್ಪರ್ಯ:** ಆ ಶೀಲವಂತನು ಸತ್ಯಭಾಮೆಯನ್ನು ವಿವಾಹವಾಗಿ ಸರಸನಾಗಿ, ಸತ್ತ್ವಗುಣ ವಿಶಿಷ್ಟನಾಗಿ, ಧರ್ಮರಾಜು ಒಬ್ಬನ ಯಮುನಾನದೀ ದೇವತ ಒಬ್ಬಳ ಅಭಿಮಾನವನ್ನು ಪಡೆಯುವನು. ಕೌರವ ಇತ್ಯಾದಿ ಶತ್ರುಸಂಹಾರ ವಿಷಯದಲ್ಲಿ ಅರ್ಜುನನಿಗೆ ಭಗವದ್ಗೀತೆ ಬೋಧಿಸುವನು.

**ಯೇಸು ಪರವಾಗಿ...**

ಗೀ. **ಪಾಪಭಾರಮು ಬುಜಮುನ ವೈಚಿಕೊನಿನ**
**ದೈವ ಮಕಟ! ಕಿರಾತ ಯೂಥಪತಿ ಬಾರಿ**
**ಯಿನುಪಶೂಲಮು ಪಾದಭಂಜನ ಮೊನರ್ಪ**
**ಬ್ರಾಣಮುಲು ವಾಸೆ, ಸ್ತಂಭರೂಪತ ವಹಿಂಚೆ.** 7

**ಅರ್ಥ:** ಪಾಪಭಾರಮು=ಎಲ್ಲಾ ಜನರ ಪಾಪವೆಂಬ ಭಾರವನ್ನು, ಭುಜಮುನ= ತನ್ನ ಭುಜದಮೇಲೆ, ವೈಚಿಕೊನಿನ=ವಹಿಸಿದ, ದೈವವು= ದೇವರಾದ ಯೇಸು, ಅಕಟ!=ಅಯ್ಯೋ!, ಕಿರಾತ=ಕಸಾಯಿ ಹೃದಯವಿರುವ, ಯೂಥಪತಿ= ಯೂದುವಂಶದ ರಾಜನೊಬ್ಬನ, ಬಾರಿ=ವಶದಲ್ಲಿರುವ, ಇನುಪ– ಶೂಲಮು=ಶೂಲದಂತಹ ಕಬ್ಬಿಣದ ಮೊಳೆ, ಪಾದ–ಭಂಜನಮು+ಒನರ್ಪನ್=

ಎರಡು ಪಾದಗಳನ್ನು ಸೀಳಿಸಿಕೊಂಡು ಇಳಿಯುವಾಗ, ಪ್ರಾಣಮುಲು+ಪಾಸೆನ್= ಪ್ರಾಣಗಳು ಬಿಟ್ಟನು, ಸ್ತಂಭ–ರೂಪತನ್=ಸಿಲುಬೆ ಒಂದರ ಆಕಾರವನ್ನು, ವಹಿಂಚೆನ್=ಯೇಸು ಧರಿಸಿದವನಾಗಿದ್ದಾನೆ.

**ತಾತ್ಪರ್ಯ:–** ಸಕಲ ಜನರ ಪಾಪಭಾರವನ್ನು ಹೊತ್ತು ತಂದಿರುವ ಯೇಸು, ಕ್ರೂರನಾದ ಯೂದರ ರಾಜರಿಗೆ ಸಿಕ್ಕಿದನು. ಕಬ್ಬಿಣದ ಮೊಳೆಯನ್ನು ಎರಡು ಪಾದಗಳಿಗೆ ಇಳಿಸಿ ಮರಕ್ಕೆನಾಟಿದಾಗ ಯೇಸು ಪ್ರಾಣವನ್ನು ಬಿಟ್ಟು ಸಿಲುಬೆ ರೂಪವನ್ನು ಧರಿಸಿದವನಾಗಿದ್ದಾನೆ.

**ಕೃಷ್ಣಪರವಾಗಿ...**

ಗೀ. **ಪಾಪ–ಭಾರಮು, ಬುಜಮುನ ವೈಚಿಕೊನಿನ**
**ದೈವಮಕಟ! ಕಿರಾತ ಯೂಥಪತಿ ಬಾರಿ**
**ಯಿನುಪಶೂಲಮು ಪಾದಭಂಜನ ಮೊನರ್ಪ**
**ಬ್ರಾಣಮುಲು ವಾಸೆ, ಸ್ತಂಭರೂಪತ ವಹಿಂಚೆ.** 7

**ಅರ್ಥ:** ಭಾರಮು=ಭೂಮಿ ಭಾರವನ್ನು, ಪಾಪನ್=ತೊಲಗಿಸುವುದು, ಬುಜಮುನ ವೈಚುಕೊನಿನ=ತನ್ನ ಜವಾಬ್ದಾರಿಯಾಗಿ ಸ್ವೀಕರಿಸಿದ, ದೈವು=ಕೃಷ್ಣನು, ಅಕಟ!=ಅಯ್ಯೋ!, ಕಿರಾತ–ಯೂಥ=ಬೇಟೆಗಾರನ ಸಮೂಹಕ್ಕೆ, ಪತಿ= ನಾಯಕನಾದವನ ಒಂದರ, ಬಾರಿ=ವಶದಲ್ಲಿರುವ, ಇನುಪಶೂಲಮು =ಕಬ್ಬಿಣದಿಂದ ಮಾಡಲ್ಪಟ್ಟ ಕುಟ್ಟಾಣಿ ತುಂಡು, ಪಾದ–ಭಂಜನಮು+ ಒನರ್ಪನ್=ಪಾದವನ್ನು ಸೀಳಿಸಿಕೊಂಡು ಹೋಗಿ, ಪ್ರಾಣಮುಲು+ ಪಾಸಡನ್= ಪ್ರಾಣವನ್ನು ಬಿಟ್ಟನು; ಸ್ತಂಭ–ರೂಪತ=ಸ್ತಂಭವೆಂಬ ನಿಶ್ಚೇಷ್ಟಸ್ಥಿತಿಯನ್ನು, ವಹಿಂಚೆ= ಹೊಂದಿದವನಾಗಿದ್ದಾನೆ.

**ತಾತ್ಪರ್ಯ:** ಭೂಭಾರವನ್ನು ದುಃಖ ಪರಿಹರಿಸುವುದು ತನ್ನ ಜವಾಬ್ದಾರಿಯಾಗಿ

ಸ್ವೀಕರಿಸಿದ ಕೃಷ್ಣನು, ಆನಾಗರಿಕನು (ಬೇಟೆಗಾರನು) ಪ್ರಯೋಗಿಸಿದ ಕಬ್ಬಿಣದ ಚೂಪಾಗಿರುವ ಬಾಣವು ಪಾದವನ್ನು ಸೀಳಿಸಿಹಾಕಿದಾಗ ಪ್ರಾಣವನ್ನು ಬಿಟ್ಟು ನಿಶ್ಚಯ ಸ್ಥಿತಿಯನ್ನು ಪಡೆದನು.

**ಯೇಸು ಪರವಾಗಿ...**

ಗೀ. **'ತನುವು ಚಾಲಿಂಚಿ ಯವತಾರಮುನು ಮುಗಿಂಚಿ**
**ನಂತ ತೀರೆನೆ? ನಾವಾರಲಾರ! ನಾಕು**
**ನೇನ ಪುನರುತ್ಥಿತುಡ ನೌದು ನಿಕ್ಕ' ಮನಿಯೆ**
**ಜೇಸು, ದಾಮಾಭಿನಂದ್ಯುಡು, ಶ್ರೀಕರುಂಡು.** 8

**ಅರ್ಥ:** ದಾಮ+ಅಭಿನಂದ್ಯುಂಡು=ಹೂಮಾಲೆಗಳಿಂದ ಗೌರವಿಸಲು ತಕ್ಕವನು, ಶ್ರೀಕರುಂಡು=ಶುಭವನ್ನು ಕೈಗೂಡಿಸುವವನು (ಆದ), ಜೇಸು=ಯೇಸು, ತನುವು–ಚಾಲಿಂಚಿ=ಶರೀರವನ್ನು ತೆಜಿಸಿ, ಅವತಾರವನ್ನು ಮುಗಿಂಚಿನಂತನ್= ಅವತಾರವನ್ನು ಸಾಲಿಸುವುದರಲ್ಲಿಯೇ, ತೀರೆನ್!=ಆಗಿದೆಯಾ!, ನಾವಾರಲಾರ!= ಓ ನನ್ನ ಶಿಷ್ಯರೇ!, ನಾಕು–ನೇನ=ನನ್ನಷ್ಟಕ್ಕೆ ನಾನು, ಪುನಃ+ಉತ್ಥಿತುಂಡನೌದು= (ಮೂರುದಿನಕ್ಕೆ) ತಿರುಗಿ ಸಮಾಧಿಯಿಂದ ಎದ್ದು ಬರುವೆನು, ನಿಕ್ಕಮು+ಅನಿಯೆ= ಇದು ನಿಜವೆಂದು ಹೇಳುವೆನು.

**ತಾತ್ಪರ್ಯ:–** ಹೂಮಾಲೆಗಳಿಂದ ಅಭಿನಂದಿಸಲು ತಕ್ಕವನು ಶುಭಪ್ರದನಾದ ಜೇಸು "ಶರೀರವನ್ನು ಬಿಡುತ್ತಿದ್ದೇನೆ, ಆದರೂ ನನ್ನ ಜೀವಯಾತ್ರೆ ಮುಗಿದಹಾಗಲ್ಲ, ಮೂರುದಿಗಳ ನಂತರ ನನಗೆ ನಾನೇ ಸಮಾಧಿಯಿಂದ ಎದ್ದು ಬರುವೆನು" ಎಂದು ತನ್ನ ಶಿಷ್ಯರೊಂದಿಗೆ ಹೇಳಿದ್ದಾನೆ.

**ವಿಶೇಷ:–** ಶ್ರೀಕರನು–ಅಂದರೇ "ಶೋಭಾವಂತವಾದ ಕಪ್ಪನೆಯ ಮಚ್ಚೆಗಳು ಇರುವ ತೋಳುಗಳಿರುವವನು" ಎಂದು ಹೇಳಿಕೊಳ್ಳಲಾಗುತ್ತದೆ. ಸಮಾಧಿಯಿಂದ ಎದ್ದು ಬಂದ ಯೇಸು ಕೈಗಳಲ್ಲಿ, ಮೊಳೆಗಳು ಹೊಡೆದಿರುವ ಕಪ್ಪನೆಯ ಮಚ್ಚೆಗಳು ಶಿಷ್ಯರಿಗೆ ಕಾಣಿಸಿವೆ. ಆದ್ದರಿಂದ ಆತನು ಶ್ರೀಕರನು, "ಶ್ರೀಕಂಠನು" ಎಂದು

ಶಿವನಿಗೆ ಪ್ರಸಿದ್ಧ ಹೆಸರು. ಅಂದರೇ 'ಶೋಭಾವಂತವಾದ ಕಪ್ಪನೆಯ ಮಚ್ಚೆ ಕಂಠದದಬಳಿ ಇರುವವನು' ಎಂದಲ್ಲವೇ ಉತ್ಪತ್ತಿಯ ಅರ್ಥವು. ಹಾಗೆಯೇ ಯೇಸು ವಿಷಯದಲ್ಲಿಯು.

***ಕೃಷ್ಣಪರವಾಗಿ...***

ಗೀ. **"ತನುವು ಚಾಲಿಂಚಿ ಯವತಾರಮುನು ಮುಗಿಂಚಿ**
**ನಂತತೀರೆನೆ! ನಾವಾರಲಾರ! ನಾಕು**
**ನೇನ ಪುನರುತ್ಥಿತುಡ ನೌದು ನಿಕ್ಕ" ಮನಿಯೆ**
**ಜೇ, ಸುದಾಮಾಭಿನಂದ್ಯುಡು, ಶ್ರೀಕರುಂಡು.** 8

**ಅರ್ಥ:** ಜೇ!=ಜಯವು ಜಯವು!, ಸುದಾಮ+ಅಭಿನಂದ್ಯುಡು=ಭಕ್ತನಾದ ಸುದಾಮನಿಂದ ಅಭಿನಂದಿಸಲು ತಕ್ಕವನು, ಶ್ರೀಕರುಂಡು=(ಹೇತುವಾಗಿ) ಲಕ್ಷ್ಮಿದೇವಿ ಕೈಯಲ್ಲಿರುವವನಾದ ಕೃಷ್ಣನು, ತನುವು ಚಾಲಿಂಚಿ=ಶರೀರವನ್ನು ತೆಜಿಸಿ, ಅವತಾರಮುನು= ಕೃಷ್ಣಾವತಾರವನ್ನು, ಮುಗಿಂಚಿನಂತ= ಸಾಲಿಸುವುದರಲ್ಲಿಯೇ, ತೀರೆನ್!=ಆಗಿದೆಯಾ?, ನಾವಾರಲಾರ!= ನನ್ನನ್ನೇ ವಿಶ್ವಾಸಿಸಿರುವ ಭಕ್ತರೇ!, ನಾಕು–ನೇನ=ನನ್ನಷ್ಟಕ್ಕೆ ನಾನೇ, ಪುನರುತ್ಥಿತುಂಡನೌದು=ತಿರುಗಿ ತಿರುಗಿ ಅವತರಿಸುತ್ತಿರುತ್ತೇನೆ, ನಿಕ್ಕಮು+ಅನಿಯೆ=ನಿಜವೆಂದು ಹೇಳುವನು.

**ತಾತ್ಪರ್ಯ:–**ಜಯವು ಜಯವು! ಸುದಾಮನಿಂದ ಅಭಿನಂದಿಸಲಾದ ಕೃಷ್ಣನು ತನ್ನನ್ನು ವಿಶ್ವಾಶಿಸಿದ ಭಕ್ತರೊಂದಿಗೆ 'ಅವತಾರವನ್ನು ಮುಗಿಸುವುದೇ ಅಂತ್ಯೆ ಅಲ್ಲ. ತಿರುಗಿ ತಿರುಗಿ ನಾನು ಅವತರಿಸುತ್ತಲೇ ಇರುತ್ತೇನೆ. ಇದು ನಿಜವು' ಎಂದು ಹೇಳಿದ್ದಾನೆ.

**ವಿಶೇಷ:–** 'ಯದಾಯದಾಹೀ ಧರ್ಮಸ್ಯ ಗ್ಲಾನಿರ್ಭವತಿ ಭಾರತ! ಅಭ್ಯುತ್ಥಾನಮ ಧರ್ಮಸ್ಯ, ತದಾತ್ಮಾ ನಾಂ ಸೃಜಾಮ್ಯಹಂ' ಎನ್ನುವುದು ಭಗವತ್ ವಾಕ್ಯವು. (ಯಾವಾಗ ಧರ್ಮಗಳಿಗೆ ಗ್ಲಾನಿ (ಆಪತ್ತು), ಅಧರ್ಮಕ್ಕೆ ವಿಸ್ತಾರವನ್ನು ಪಡೆಯುವುದೋ ಆಗ ನನಗೆ ನಾನೇ ಸೃಷ್ಟಿಸಿಕೊಂಡು ಅವತರಿಸುತ್ತಿರುತ್ತೇನೆ

ಎಂದು ಶ್ಲೋಕಾರ್ಥವು.) 'ನನಗೆ ನಾನೇ ಪುನರುತ್ಥಿತುಂಡನೌದು' ಎಂಬ ಮಾತಿಗೆ ಏತತ್ ಗೀತೆಯ ಶ್ಲೋಕವೇ ಪ್ರಮಾಣವು.

**ಯೇಸು ಪರವಾಗಿ...**

**ಕ. ಪರಲೋಕ ಹಾರಿಮೋಕ್ಷ**
**ಸ್ಥಿರಪದಪಿತ, ದೇವದೇವ ಚಿಹ್ನಿತುಡೌ ನೀ**
**ಕರುಣಾಮಯು ಚರಿತಮು ನೇ**
**ಪುರುಷುಡು ವಿನು ಜದುವು ನತಡು ಪೋಂದ ಡಘುಮ್ಮುಲ್** 9

**ಅರ್ಥ**: ಪರಲೋಕ=ಪರಲೋಕದಲ್ಲಿ, ಹರಿ=ಮನೋಜ್ಞವಾದ, ಮೋಕ್ಷ=ಮೋಕ್ಷವೆನ್ನುವ, ಸ್ಥಿರಪದ=ನಿಶ್ಚಲವಾದ ಸ್ಥಾನಕ್ಕೆ, ಪಿತ=ತಂದೆಯಾದವನು (ಅಂದರೇ ಪರಲೋಕದಲ್ಲಿರುವ ತಂದೆ). ದೇವದೇವ=ದೇವರಿಗೇ ದೇವರೆಂದು, ಚಿಹ್ನಿತುಂಡು+ಔ=ಹೆಸರು ತಂದುಕೊಂಡವನಾದ, ಈ ಕರುಣಾಮಯು=ಈ ಯೇಸು ಕ್ರೀಸ್ತು ಒಬ್ಬರ, ಚರಿತಮುನ್=ಕಥೆಯನ್ನು, ಯಾವ ಪುರುಷನು=ಯಾರು, ವಿನುನ್=ಕೇಳುವನೋ, ಚದುವುನ್=ಓದುವನೋ, ಅತಂಡು=ಅಂಥವನು, ಅಘಮ್ಮುಲ್=ಪಾಪಗಳನ್ನು, ಪೋಂದಂಡು=ಹೊಂದಿರುವುದಿಲ್ಲ. ತಾತ್ಪರ್ಯವು: ಮನೋಹರವಾದ ಮೋಕ್ಷಸ್ಥಾನವಿರುವ ಪರಲೋಕದಲ್ಲಿ ತಂದೆಯು, ದೇವರಿಗೇ ದೇವರಾದವನು ಕರುಣಾಮಯನಾದ ಈ ಯೇಸು ಚರಿತ್ರೆಯನ್ನು ಯಾರು ಕೇಳುವನೋ ಯಾರು ಪಠಿಸುವರೋ ಅಂಥವನು ಪಾಪರಹಿತನಾಗಬಲ್ಲನು.

***ಕೃಷ್ಣ ಪರವಾಗಿ...***

**ಕ. ಪರಲೋಕಹಾರಿ, ಮೋಕ್ಷ**
**ಸ್ಥಿರಪದಪಿತ, ದೇವದೇವ ಚಿಹ್ನಿತುಂಡೌ ನೀ**
**ಕರುಣಾಮಯು ಚರಿತಮು ನೇ**
**ಪುರುಷುಂಡು ವಿನುಂ ಜದುವು ನತಂಡು ಪೋಂದಂ ಡಘಮ್ಮುಲ್** 9

**ಅರ್ಥ:** ಪರ–ಲೋಕ=ಶತ್ರುಸಮೂಹವನ್ನು, ಹರಿ=ಸಂಹಾರಿಸಿದವನು (ಅಂದರೇ

ಶಿಶುಪಾಲ ದಂತಮುಖ ಇತ್ಯಾದಿ ಶತ್ರುಗಳನ್ನು ಕೊಂದವನನ್ನು), ಮೋಕ್ಷ–ಸ್ಥಿರ–ಪದ=ಮೋಕ್ಷವೆಂಬ ನಿಶ್ಚಲಸ್ಥಾನಕ್ಕೆ, ಪಿತ=ತಂದೆಯಹಾಗೆ ಕಾರಣವಾದವನು, ದೇವದೇವ=ದೇವತೆಗಳಿಗೇ ದೇವರೆಂದು, ಚಿಹ್ನಿತುಂಡು+ಔ= ಹೆಸರುವಾಸಿಯಾದವನ, ಈ ಕರುಣಾಮಯು=ದಯಾಸ್ವರೂಪನಾದ ಈ ಕೃಷ್ಣನೊಬ್ಬನ, ಚರಿತಮುನ್=ಕಥೆಯನ್ನು, ಏ ಪುರುಷುಂಡು=ಯಾರು, ವಿನುನ್=ವಿನುನೋ, ಚದುವುನ್=ಓದುವನೋ, ಅತಂಡು=ಅಂಥವನು, ಅಘುಮಲ್=ಪಾಪಗಳು, ಪೊಂದಂಡು=ಹೊಂದಿರುವುದಿಲ್ಲ.

**ತಾತ್ಪರ್ಯ:** ಶತ್ರುಸಂಹಾರನನ್ನು, ಮೋಕ್ಷಸ್ಥಾನಕ್ಕೆ ಕಾರಣಭೂತನನ್ನು, ದೇವದೇವನನ್ನು, ದಯಾಸ್ವರೂಪನಾದ ಈ ಕೃಷ್ಣನ ಚರಿತ್ರೆಯನ್ನು ಯಾರು ನಂಬುವರೋ ಯಾರು ಪಠಿಸುವರೋ ಅತನು ಪಾಪರಹಿತನಾಗಬಲ್ಲನು.

**ಪ್ರಶ್ನೆ:– ಕೊನೆಯದಾಗಿ ಒಂದು ಪ್ರಶ್ನೆಯನ್ನು ಕೇಳುತ್ತಿದ್ದೇನೆ. ಆದರಣಕರ್ತ ಬರುತ್ತಾನೆ ಎಂದು ದ್ವಿತೀಯ ದೈವಗ್ರಂಥದಲ್ಲಿ ಇರುವುದರಿಂದ ಆತನು ಬರುವುದು ಸತ್ಯವೇ ಆಗುತ್ತದೆ. ಆದರೇ ಮೂರು ದೈವಗ್ರಂಥಗಳಲ್ಲಿ ಅಧರ್ಮಗಳನ್ನು ಖಂಡಿಸಿ, ದೇವರು ಧರ್ಮಸಂಸ್ಥಾಪನೆ ಮಾಡಿದಂತೆ ಸಂಪೂರ್ಣವಾಗಿ ಜ್ಞಾನವು ಹೇಳಲ್ಪಟ್ಟಿದೆ. ಇಷ್ಟು ಜ್ಞಾನ ಹೇಳಿದ ನಂತರ ಕೂಡಾ ದೇವರು ಪುನಃ ಮನುಷ್ಯನಾಗಿ ಬರಬೇಕಾದ ಅವಶ್ಯವೇನಿದೆ?**

**ಉತ್ತರ:–** ದ್ವಿತೀಯ ದೈವಗ್ರಂಥದಲ್ಲಿ **ಆದರಣಕರ್ತ** ಬರುತ್ತಾನೆಂದು ಹೇಳಿರುವುದು ನಿಜ, ಆದರೂ ಆದರಣಕರ್ತ ಎಂದರೇ ಯಾರು? ಹೇಗಿರುತ್ತಾನೆ? ಎಂಬ ವಿಷಯವು ಮನುಷ್ಯರಿಗೆ ಅರ್ಥವಾಗದೆ ಒಂದು ಮತದವರು "ಆದರಣಕರ್ತ ನಮ್ಮ ಪ್ರವಕ್ತನೇ" ಎಂದು ಹೇಳುತ್ತಿದ್ದಾರೆ. ಹಾಗೆ ಬಂದಿದ್ದರೇ ನಮಗು ಕೂಡಾ ಸಂತೋಷವೇ. ಈ ವಿಷಯದಲ್ಲಿ ಅವರು ಅಪಾರ್ಥ ಮಾಡಿಕೊಂಡಿರಬಹುದು. ಮುಹಮ್ಮದ್ ಪ್ರವಕ್ತರವರೇ ಆದರಣಕರ್ತಯೆಂದು ಕೆಲವರು ಮುಸ್ಲಿಮ್‌ರು ಹೇಳುತ್ತಿದ್ದರೂ ಖುರಾನ್ ಗ್ರಂಥದಲ್ಲಿ ಜಿಬ್ರಯೇಲ್ ಬೋಧಿಸುತ್ತಿದ್ದಾಗ "ನೀನು ಮನುಷ್ಯರನ್ನು ಎಚ್ಚರಿಸುವವನೇ" ಎಂದು 13ನೇ ಸೂರಾ 7ನೇ ಆಯತ್‌ನಲ್ಲಿ

ಹೇಳಿದ್ದಾರೆ. ಅಷ್ಟೇಅಲ್ಲದೆ ಸೂರಾ 3, ಆಯತ್ 80ರಲ್ಲಿ (3–80) **"ದೂತರನ್ನು, ಪ್ರವಕ್ತರನ್ನು ದೇವರಾಗಿ ಮಾಡಿಕೊಳ್ಳಿರೆಂದು ನಿಮಗೆ ಎಂದೂ ಹೇಳಲಿಲ್ಲ"** ಎಂದು ಇದೆ. ಆದರಣಕರ್ತ ಎಂದರೇ ಭಾತರ ದೇಶ ಭಾಷೆಯಲ್ಲಿ ಭಗವಂತನೆಂದು ಅರ್ಥ. ದೇವರೇ ಆದರಣಕರ್ತನಾಗಿ ಬರುವುದರಿಂದ ಪ್ರವಕ್ತರವರಿಗೆ ಆದರಣಕರ್ತಗೆ ಸಂಬಂಧವಿಲ್ಲವೆಂದು ಹೇಳಬಹುದು. ಅಂತಿಮ ದೈವಗ್ರಂಥವು ಬಂದಿರುವುದರಿಂದ ಮತ್ತೊಂದು ದೈವಗ್ರಂಥ ಬರುವುದಕ್ಕು ಸಹ ಅವಕಾಶವಿಲ್ಲ. ಇನ್ನೂ ದೊಡ್ಡ ಜ್ಞಾನವಿರುವ ಗ್ರಂಥ ಬಂದರೂ ಅವುಗಳನ್ನು ಜ್ಞಾನಗ್ರಂಥಗಳಾಗಿ ಹೇಳಬಹುದು ಆದರೇ ದೈವಗ್ರಂಥವೆನ್ನುವುದಕ್ಕೆ ಸಾಧ್ಯವಿಲ್ಲ.

ಸೃಷ್ಠಿ ಆದಿಯಲ್ಲಿ ಜ್ಞಾನವು ಹೇಳಲ್ಪಟ್ಟಿದ್ದರೂ ಈ ಮಧ್ಯೆ ಐದುಸಾವಿರ ವರ್ಷಗಳಿಂದ **ಮೂರು ದೈವಗ್ರಂಥಗಳು ಹೊರಗೆ ಬಂದಿವೆ. ಮೂರು ದೈವಗ್ರಂಥಗಳಲ್ಲಿ ನಾಲಕ್ಕು ಅಧರ್ಮಗಳ ಅಡಗಿಸಿ, ಮೂರು ಧರ್ಮಗಳ ಪ್ರತಿಷ್ಠೆ ಇರುವುದು.** ಈ ವಿಧಾನವು ಕಳೆದ ಮೂರು ಯುಗಗಳಿಗೆ ಸರಿಹೋಗಬಲ್ಲದು. ಈದಿನ ನಡೆಯುತ್ತಿರುವ ಕಲಿಯುಗದಲ್ಲಿ ಮೂರು ಗ್ರಂಥಗಳಲ್ಲಿ ಹೇಳಿರುವ ಜ್ಞಾನಕ್ಕಿಂತಲೂ ಸ್ವಲ್ಪ ಬೇರೆಯಾಗಿರುವ ಜ್ಞಾನವು ಅವಶ್ಯ. ಕಳೆದ ಮೂರು ಯುಗಗಳಲ್ಲಿ ಮುಖ್ಯವಾದ 'ಮತ' ಎಂಬ ಅಧರ್ಮವು ಇಲ್ಲ. ಈಗ ಮುಂದಿರುವ ನಾಲಕ್ಕು ಅಧರ್ಮಗಳಿಗಿಂತಲೂ ಮೀರಿರುವುದು 'ಮತ' ಎನ್ನುವ ಅಧರ್ಮವು ಬಂದಿದೆ. ಇದಕ್ಕು ಮೊದಲು ದೇವರು ಅವತರಿಸಿರುವುದು ಮೂರು ಯುಗಗಳಿಂದ ಮನುಷ್ಯರಲ್ಲಿ ಜಾಗಮಾಡಿಕೊಂಡಿರುವ ಅಧರ್ಮಗಳನ್ನು ತೆಗೆದುಹಾಕುವುದಕ್ಕೆ. ಆದರೇ ಈಗ ಅಂದಿನ ಅಧರ್ಮಗಳಿಗಿಂತಲೂ ಮೀರಿರುವುದು, ಬಲವಾಗಿರುವುದಾದ 'ಮತ' ಎಂಬ ದೊಡ್ಡ ಅಧರ್ಮವು ಹುಟ್ಟಿಬಂದಿದೆ. ಅದನ್ನು ಇಲ್ಲದಂತೆ ಮಾಡುವುದಕ್ಕೆ ಅಂದಿನ ಬೋಧನೆಗಳಿಗಿಂತಲೂ, ಅಂದಿನ ಜ್ಞಾನಕ್ಕಿಂತಲೂ ಮೀರಿದ ಜ್ಞಾನವು ಅವಶ್ಯವೆನಿಸುತ್ತದೆ. ಪೂರ್ವವು ಸಾವಿರಜನ ಜನಸಂಖ್ಯೆಯಲ್ಲಿ ಕೇವಲ ಹತ್ತುಜನ ಅಥವಾ ಹದಿನೈದುಜನ ಒಂದು ಕುಲಕ್ಕೆ ಸೇರಿದವರು ಇರುತ್ತಿದ್ದರು. ಸಾವಿರಜನರಲ್ಲಿ ಅಷ್ಟು ಕುಲಗಳು ಇರುವಾಗ ಒಂದು ಅಗ್ರಕುಲದವರು ಮಾತ್ರ ಒಂದು ಅಥವಾ ಎರಡು ಅಥವಾ ಮೂರು

ಕುಟುಂಬದವರು ಇರುತ್ತಿದ್ದರು. ಅಗ್ರಕುಲದವರಿಗೇ ಓದು ಬರುತ್ತಿತ್ತು. ಅವರಿಗೇ ಧರ್ಮಗಳಾಗಲೀ, ಅಧರ್ಮಗಳಾಗಲೀ ತಿಳಿಯುತ್ತಿದ್ದವು. ಉಳಿದ ಮನುಷ್ಯ ರೆಲ್ಲರೂ ಓದುಬರಹ ಇಲ್ಲದವರಾಗಿ, ಧರ್ಮಾಧರ್ಮಗಳು ತಿಳಿಯದವ ರಾಗಿ ಸಾಧಾರಣ ಜೀವನವನ್ನು ಕಳೆಯುತ್ತಿದ್ದರು.

ಪೂರ್ವವು ಅಧರ್ಮಗಳನ್ನು ಆಚರಿಸುವವರು ಕೆಲವರೇ ಇರುತ್ತಿದ್ದರು. ಅವರಿಗಾಗಿಯೇ ದೈವಗ್ರಂಥಗಳಲ್ಲಿನ ಜ್ಞಾನವು ಹೇಳಲ್ಪಟ್ಟಿದೆ. ಆದರೇ ಪೂರ್ವವು ಸಾವಿರಕ್ಕೆ ಹತ್ತು ಅಥವಾ ಇಪ್ಪತ್ತು ಜನ ಮಾತ್ರವೇ ಧರ್ಮಾಧರ್ಮಗಳ ಆಚರಣೆ ಹೊಂದಿರುವವರು ಇದ್ದರೆ, ಈದಿನ ಸಾವಿರಕ್ಕೆ 999 ಜನ 'ಮತ' ಎನ್ನುವ ಅಧರ್ಮವನ್ನು ಹೊಂದಿದ್ದಾರೆ. ಮತ ಪೂರ್ವದಲ್ಲಿ ನಾಲಕ್ಕು ಅಧರ್ಮ ಗಳಿಗಿಂತಲೂ ಹೆಚ್ಚು ಸಾಂದ್ರತೆಯಲ್ಲಿ ಮನುಷ್ಯರಲ್ಲಿ ಅಂಟಿಕೊಂಡು ಹೋಗಿದೆ. ಮತವೆಂಬ ಜಾಢ್ಯವು ಏಳು ಅಥವಾ ಎಂಟು ವರ್ಷಗಳ ಬಾಲ್ಯದಿಂದ ಪ್ರಾರಂಭವಾಗುತ್ತಿದೆ. ಮತವೆಂಬ ರೋಗವು ಜಾಢ್ಯದ ರೂಪದಲ್ಲಿ ಅಂಟಿ ಕೊಂಡಿರುವುದರಿಂದ, ಅದರಿಂದ ಮನುಷ್ಯರನ್ನು ಹೊರಗೆ ಎಳೆಯುವುದಕ್ಕೆ ದೇವರು ಮೊದಲು ಹೇಳಿರುವ ಬೋಧನೆಗಳಿಗಿಂತಲೂ ಮೀರಿದ ಜ್ಞಾನವನ್ನು ಹೇಳಬೇಕಾಗಿದೆ. ಇದರ ವಿಷಯವಾಗಿ ದ್ವಿತೀಯ ದೈವಗ್ರಂಥದಲ್ಲಿ ಯೇಸು ಮೊದಲೇ ಒಂದು ಮಾತು ಹೇಳಿದ್ದಾನೆ. ಯೇಸು ಭೂಮಿಮೇಲಿರುವಾಗಲೇ ಮತಗಳ, ಕುಲಗಳ ಮಾಯೆಯನ್ನು ಕುರಿತು ನೋಡಿದ್ದಾನೆ. ಅವುಗಳೇ ಆತನ ಮರಣಕ್ಕೆ ಕಾರಣವಾಗಿವೆಯೆಂದು ಹೇಳಬಹುದು. ಅವುಗಳ ಅಸೂಯೆಗಳು ಯೇಸು ಮೇಲೆ ಚೆನ್ನಾಗಿ ಕೆಲಸ ಮಾಡಿವೆ. ಆದ್ದರಿಂದ ಆತನು ಮೊದಲೇ ತನ್ನ ಮಾತುಗಳಲ್ಲಿ ಹೇಳಿರುವುದು ನೋಡೋಣ.

**(ಯೆಹೋನು 16-12,13) "ನಾನು ನಿಮ್ಮೊಂದಿಗೆ ಹೇಳಬೇಕಾಗಿರುವವು ಇನ್ನೂ ಅನೇಕ ಸಂಗತಿಗಳು ಇವೆ. ಆದರೇ ಈಗ ನೀವು ಅವುಗಳನ್ನು ಸಹಿಸಿಕೊಳ್ಳುವುದಿಲ್ಲ. ಆದರೇ ಆತನು ಎಂದರೇ ಸತ್ಯಸ್ವರೂಪಿಯಾದ ಆತ್ಮ ಬಂದಾಗ ನಿಮ್ಮನ್ನು ಸರ್ವಸತ್ಯದೊಳಗೆ ನಡೆಸುವನು. ಆತನು ತನ್ನಷ್ಟಕ್ಕೆ ತಾನೇ ಏನೂ ಬೋಧಿಸದೆ**

**ಯಾವುದನ್ನು ಕೇಳುವನೋ ಅವುಗಳನ್ನು ಬೋಧಿಸಿ ಸಂಭವಿಸಲಾಗುವ ಸಂಗತಿಗಳನ್ನು ನಿಮಗೆ ತಿಳಿಸುವನು."**

ಈ ವಾಕ್ಯವು ಆಗ ಇದ್ದರೂ ಮತವೆಂಬ ಅಧರ್ಮವನ್ನು ಕುರಿತು ಹೇಳಿರುವುದೇ ಎಂದು ಅರ್ಥವಾಗುತ್ತಿದೆ. ಆಗ ಮತವನ್ನು ಕುರಿತು ಅದು ದೊಡ್ಡ ಮಾಯೆ ಎಂದು ಹೇಳಿದರೂ, ಮನುಷ್ಯರು ಸಹಿಸಲಾರದ ವಿಧವಾಗಿ ಮತ ಮಾಯೆಯಲ್ಲಿ ಮುಳುಗಿ ಹೋಗಿರುವುದರಿಂದ ಆತನು ಹಾಗೆ ಹೇಳಿದ್ದಾನೆ. ಮುಂಬರುವ ಭಗವಂತನು ತಪ್ಪದೆ ಮತವೆಂಬ ಮಾಯೆಯನ್ನು ತೊಲಗಿಸುವುದಕ್ಕೇ ಬರುತ್ತಾನೆ, ಆದುದರಿಂದ **"ನಿಮ್ಮನ್ನು ಮತರಹಿತವಾದ ಸತ್ಯದೊಳಗೆ ನಡೆಸುವನು"** ಎಂದು ಸೂಚನಾ ಪ್ರಾಯವಾಗಿ ಹೇಳಿದ್ದಾನೆ. ಆತನು ಸ್ವತಃವಾಗಿ ತನ್ನಷ್ಟಕ್ಕೆ ತಾನು ಬೋಧಿಸದೆ ಅಂದಿನ ಕಾಲದಲ್ಲಿರುವ ಮತ ಅನ್ಯಾಯಕತ್ವಗಳನ್ನು, ಮತ ಹೋರಾಟಗಳನ್ನು, ಮತದಿಂದ ನಡೆಯುವ ಯುದ್ಧ ವಿನಾಶನಗಳನ್ನು ನೋಡಿ, ಆಗ ಏನು ನಡೆಯುತ್ತಿದೆಯೋ ಅದನ್ನು ಕೇಳಿ, ಅದನ್ನು ಕುರಿತಾಗಿಯೇ ಬೋಧಿಸುವನು. ಅಂದರೇ ಮತದ ಒಂದು ಅಧರ್ಮವನ್ನು ಕುರಿತು ಹೇಳುವನೆಂದು ಹೇಳುವುದಾಗಿದೆ. ಈ ಸಲ ಬರುವ ದೇವರು ಮೂರು ದೈವಗ್ರಂಥಗಳ ಜ್ಞಾನವನ್ನು ಮೀರಿದ ಜ್ಞಾನವನ್ನು ಹೇಳಬೇಕಾಗಿರುತ್ತದೆ. ಆದ್ದರಿಂದ "ಮುಂಬರುವ ಆದರಣಕರ್ತ ನಾನು ಹೇಳದಿರುವವುಗಳನ್ನು ಕೂಡಾ ಹೇಳುವೆನೆಂದು" ದ್ವಿತೀಯ ದೈವಗ್ರಂಥದಲ್ಲಿ ಹೇಳಿರುವುದಾಗಿದೆ. ಈಗ ಮುಂಬರುವ ಭಗವಂತನು ಮತ ಮಾಯೆಯನ್ನು ಕುರಿತು ಮೊದಲು ಹೇಳಿರುವ ಬೋಧನೆಗಳಿಗಿಂತಲೂ ಹೆಚ್ಚು ಬೋಧನೆಗಳು ಹೇಳಬೇಕಾಗಿದೆ. ಆದ್ದರಿಂದ ದೇವರ ಸೇವೆಯಲ್ಲಿ ಭಾಗವಾಗಿ ನಾವು ಮೊದಲೇ ಮತರಹಿತ ಜ್ಞಾನವನ್ನು ಬೋಧಿಸುತ್ತಿದ್ದೇವೆ. ***ಮತವನ್ನು ಬಿಡಿ, ಪಥವನ್ನು ಅನುಸರಿಸಿರಿ.***

***ಸಮಾಪ್ತಿ***

# ಒಬ್ಬನೇ ಇಬ್ಬರು

| ತಾಮಸ | ರಾಜಸ | ಸಾತ್ವಿಕ | ಯೋಗ |
| --- | --- | --- | --- |
| ↓ | ↓ | ↓ | ↓ |
| ಮ | ತ | ಮ್ | ಮತ ರಹಿತ |


Author :

The Only GURU of Three Religions

The Spiritual Emperor, Thraitha Theorem Originator

**Sri Acharya Prabodhananda Yogeeshwarulu**



**www.thraithashakam.org**